# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಅಕ್ಟೋಬರ್ ೮, ೨೦೧೫ (ಅಶ್ವಯುಜ ೧೬, ಶಕ ವರ್ಷ ೧೯೩೭)<br>Bengaluru, Thursday, October 8, 2015 ( Aashwayuja 16, Shaka Varsha 1937) | ಸಂಚಿಕೆ ೪೧<br>Issue 41 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಒಇ 283 ಪೊಸಿಪ 2015, ಬೆಂಗಳೂರು, ದಿನಾಂಕ : 16-07-2015.**

ಡಿವೈಎಸ್‌ಪಿ (ಡಿಟೆಕ್ಟಿವ್)ರವರುಗಳ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ : 31-03-2015 ರಲ್ಲಿದ್ದಂತೆ ತಯಾರಿಸಿ ಇದರೊಂದಿಗಿರುವ ಅನುಬಂಧದಲ್ಲಿ ಲಗತ್ತಿಸಲಾಗಿದೆ.

ಈ ಪಟ್ಟಿಯಲ್ಲಿ ನಮೂದಿಸಿದ ಅಧಿಕಾರಿಗಳ ಜ್ಯೇಷ್ಠತೆ ಸೇವಾ ವಿವರಗಳ ಕುರಿತಂತೆ ಯಾವುದಾದರೂ ಆಕ್ಷೇಪಣೆ ಅಥವಾ ಸಲಹೆಗಳೇನಾದರೂ ಇದ್ದಲ್ಲಿ ಅವುಗಳನ್ನು ಲಿಖಿತವಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ವಿಧಾನಸೌಧ, ಬೆಂಗಳೂರು-560001ರವರಿಗೆ ಈ ಅಧಿಸೂಚನೆ ಪ್ರಕಟವಾದ 30 ದಿನಗಳೊಳಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ದಿನಾಂಕ : 31-03-2015ರಂದು ಇದ್ದಂತೆ ಡಿವೈಎಸ್‌ಪಿ (ಡಿಟೆಕ್ಟಿವ್) ರವರುಗಳ ಕರಡು ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರು | ಜನ್ಮ ದಿನಾಂಕ | ಡಿವೈಎಸ್‌ಪಿ (ಡಿಟೆಕ್ಟಿವ್) ಹುದ್ದೆಗೆ ಮುಂಬಡ್ತಿ ಅರ್ಹತಾ ದಿನಾಂಕ | ಷರಾ |
|---|---|---|---|---|
| 1. | ರಾಘವೇಂದ್ರ. ಕೆ. ಹೆಗಡೆ | 05-02-1977 | 24-09-2012 | - |
| 2. | ಶರತ್ ಎಂ.ಡಿ. | 18-07-1976 | 24-09-2012 | - |
| 3. | ಸೈಮನ್ ಸಿ.ಎ. | 05-10-1974 | 24-09-2012 | - |
| 4. | ವಿವೇಕಾನಂದ ಜಿ. ತುಳಸಿಗೇರೆ | 28-07-1976 | 24-09-2012 | - |
| 5. | ವೆಂಕಟೇಶ್. ಎನ್. | 02-07-1976 | 24-09-2012 | ಎಸ್.ಟಿ. |
| 6. | ಎಂ.ಎಸ್. ಕೌಲಾಪುರೆ | 22-07-1975 | 24-09-2012 | - |
| 7. | ಅಬ್ದುಲ್ ರವೂಫ್ ಕರ್ನೂಲ್ | 17-04-1974 | 24-09-2012 | - |
| 8. | ನಾಗಭೂಷಣ್. ಎಚ್. | 22-02-1975 | 24-09-2012 | ಎಸ್.ಸಿ. |

| | | | | |
|---|---|---|---|---|
| 9. | ಶ್ರೀನಿವಾಸ್. ಎಸ್.ಆರ್. | 25–06–1975 | 24–09–2012 | ಎಸ್.ಸಿ. |
| 10. | ಎಂ.ಹೆಚ್. ಪೈಕ್ | 22–07–1974 | 28–01–2015 | – |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 732**

## Commercial Taxes Department

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU.

**Present :** RITVIK PANDEY, IAS,
Commissioner of Commercial Taxes.
(Karnataka) Bengaluru.

**Sub :** KTL Act, 1979 - Clarification with regard to levy of tax on luxuries provided such as accommodation, air-conditioning etc. provided in an ICU of hospital- reg.

**Ref :** Letter NO. RCN:583488977 dated 26.09.2013 of M/s Agrawal Seva Samiti, Bengaluru-70.

**PREAMBLE :**

The applicant Dr. Sathish Kumar Jain, Hospital Director, Agrawal Seva Samiti, Padmanabhanagar, Bengaluru - 560 070 has represented that when they collect luxury tax from the patients on the facility provided in ICU of hospital, they have to face the anger of patients/patients' relatives who assert that they have not taken the services in ICU of the hospital for enjoyment or comfort but for the survival of a patient. He is of the understanding that it is reasonable to levy luxury tax on deluxe and super deluxe rooms of hospitals which are chosen on the basis of affordability. In this backdrop, he has sought a clarification as to whether luxury tax is applicable for the accommodation/air-conditioning provided in ICU/ICCU of a hospital.

2. The matter is examined.

i) As per sub-section (1-C) of Section 2 **"Charges for luxuries provided in a hospital"** is defined to mean charges for accommodation provided in a hospital for any patient or inmate or resident, by whatever name called and his attendant including charges for air-conditioning, telephone, telephone calls, television, radio, music, extra beds and the like but does not include any charges for food, drink, laundry or other amenities, medicines, medical including consultation, testing, diagnostic and nursing services, therapeutic services or other similar services.

ii) Section 3-E provides for levy and collection of tax on luxury provided in a hospital and the same is extracted hereunder.

"There shall be levied and collected tax at the rate of 8% on the charges collected for luxuries provided in a hospital in a room such as accommodation, air-conditioning, telephone, telephone calls, television, radio, music, extra beds and the like, where such charges are more than Rs.l000/- per day per room."

iii) Intensive Care Unit (ICU), also known as Critical Care Unit (CCU) caters to patients with the most severe and life-threatening illness or injuries; that require constant, close monitoring and support from specialistic equipment and medication in order to maintain normal bodily functions. They are staffed by highly trained doctors and critical care nurses who specialize in caring for serious ill patients. Common conditions that are treated within ICUs include those such as trauma, multiple organ failure, sepsis etc.

Patients may be transferred directly to an ICU from an emergency department if required, or from a ward if they rapidly deteriorate; or immediately after surgery if the surgery is majorly invasive and the patient is at high risk of complications. Hospitals may have ICUs that cater to specific medical specialty such as those listed below.

➪ Intensive Coronary Care Unit (ICCU)
➪ Neonatal Intensive Care
➪ Psychiatric Intensive Care Unit (PICU) etc.

iv) Medical bills/Hospital charge bills raised on the patients and produced by the applicant revealed that charges have been collected separately under various headings.

- Ward rental (Intensive Care Unit)
- Consultation
- Registration charges
- Administrative expenses
- Resident doctor charges

- Nursing charges
- Monitor charges
- Luxury tax on ward rental
- Oxygen charges
- ECG charges etc.

To illustrate, the applicant has charged and collected Rs.1,5OO/- separately towards Ward Rental (Intensive Care Unit) in Hospital Bill No. 1314/02140 dt. 28.09.2013 along with other charges aggregating to Rs. 5,170-00.

3. In the light of the above discussion, charges collected for luxuries provided in a room of a Hospital such as accommodation, air-conditioning, telephone, telephone calls, television, radio, music, extra beds and the like where such charges are more than Rs.1,OOO/- per day per room attract Luxury tax at the rate of 8%. Since accommodation provided in an ICU (Intensive Care Unit), amounts to providing accommodation in a room of a hospital, luxury tax at the rate of 8% becomes leviable provided the charges per day per room is more than Rs. 1,OOO-OO. Hence, the following clarification.

**CLARIFICATION NO. KTL/CR-08/2013-14 DATED : 02.07.2015**

It is hereby clarified that the accommodation provided in an ICU (Intensive Care Unit) charging more than Rs. 1,OOO-OO per day per room attracts luxury tax at the rate of 8% under the Karnataka Tax on Luxuries Act, 1979.

**P.R. 733**
**SC-25**

**RITVIK PANDEY**
Commissioner of Commercial Taxes,
(Karnataka) Bengaluru.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 61 ಎಲ್‌ಆರ್‌ಎಂ 2014, ಬೆಂಗಳೂರು, ದಿನಾಂಕ : 07–03–2015.**

ಹರಿಹರ ಜಮೈತ್ ಅಹ್ಲೆ, ಹದೀಸ್, ಈದ್ಗಾ ಟ್ರಸ್ಟ್ (ರಿ), ಹರಿಹರ ಇವರು ಹರಿಹರ ತಾಲ್ಲೂಕು, ಅಮರಾವತಿ ಗ್ರಾಮದ ಸ.ನಂ. 85/2ಎ3 ರಲ್ಲಿ 2–00 ಎಕರೆ ಕೃಷಿ ಜಮೀನನ್ನು **ಈದ್ಗಾ ಮೈದಾನ ಹಾಗೂ ಅಲ್ಪಸಂಖ್ಯಾತರ ಶಿಕ್ಷಣದ** ಸಲುವಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ರಡಿ ವಿನಾಯಿತಿ ನೀಡಲು ಕೋರಿ ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್‌ಆರ್‌ಎಂ (109)/ಸಿಆರ್/3/2013–14, ದಿನಾಂಕ : 12–08–2014ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109(1)ರಡಿ ಮೇಲ್ಕಂಡ ಒಟ್ಟು 02 ಎಕರೆ ಕೃಷಿ ಜಮೀನನ್ನು ದಾನವಾಗಿ ಪಡೆಯಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರಂತೆ ನಿಗದಿತ ಭೂ ಪರಿವರ್ತನಾ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ದಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ./ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ 1969ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 734**
**SC-20**

**ಬಿ.ಎಂ. ದಾಕ್ಷಾಯಣಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

## ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು, ಬೆಂಗಳೂರು

**ವಿಷಯ :** ಆಯೋಗದ ದಿನಾಂಕ : 25–09–2014ರ ಅಧಿಸೂಚನೆಯಲ್ಲಿ ಅಧಿಸೂಚಿಸಿದ ವಿವಿಧ ತಾಂತ್ರಿಕ/ತಾಂತ್ರಿಕೇತರ ಹುದ್ದೆಗಳ ನೇಮಕಾತಿಗೆ ದಿನಾಂಕ : 06–12–2014 ರಿಂದ 08–12–2014 ಮತ್ತು 14–12–2014 ರಂದು ನಡೆದ ಸ್ಪರ್ಧಾತ್ಮಕ ಪರೀಕ್ಷೆ/ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಗಳಲ್ಲಿ ದುರಾಚಾರ ಎಸಗಿರುವ ಅಭ್ಯರ್ಥಿಗಳಿಗೆ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ :** 1. ಆಯೋಗದ 13–01–2015 ಹಾಗೂ 24–01–2015ರ ಕಾರಣ ಕೇಳುವ ನೋಟೀಸ್‌ಗಳು.

2. ದಿನಾಂಕ : 27–05–2015 ಮತ್ತು 29–05–2015ರ ವಿಚಾರಣಾಧಿಕಾರಿಗಳ ವರದಿಗಳು.

**ಪ್ರಸ್ತಾವನೆ :**

ಆಯೋಗವು ಸರ್ಕಾರದ ವಿವಿಧ ಇಲಾಖೆಗಳಲ್ಲಿನ ತಾಂತ್ರಿಕ/ತಾಂತ್ರಿಕೇತರ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ 2014ರ ಡಿಸೆಂಬರ್ ಮಾಹೆಯಲ್ಲಿ ನಡೆಸಿದ ಸ್ಪರ್ಧಾತ್ಮಕ/ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಗಳಲ್ಲಿ ಕೆಲವು ಅಭ್ಯರ್ಥಿಗಳು ಪರೀಕ್ಷಾ ಕೊಠಡಿಗಳಲ್ಲಿ ಅನಧಿಕೃತವಾಗಿ ಮೊಬೈಲ್ ದೂರವಾಣಿ ಹೊಂದಿರುವ ಬಗ್ಗೆ/ಪರೀಕ್ಷಾ ಕೊಠಡಿಯಲ್ಲಿ ಪ್ರಶ್ನೆಪತ್ರಿಕೆಗಳ ಪ್ಯಾಕೆಟ್‌ನ್ನು ಅವರ ಮುಂದೆ ತೆರೆದಿರುವುದಿಲ್ಲವೆಂದು ಆಕ್ಷೇಪಿಸಿ ಅನಗತ್ಯ ಗೊಂದಲವನ್ನುಂಟು ಮಾಡಿ ಇತರೆ ಅಭ್ಯರ್ಥಿಗಳಿಗೂ ತೊಂದರೆಯುಂಟು ಮಾಡಿರುವ ಬಗ್ಗೆ/ ಮಾಧ್ಯಮದೆದುರು ಹೇಳಿಕೆ ನೀಡಿರುವ ಬಗ್ಗೆ ಕೆಲವು ಪರೀಕ್ಷಾ ಉಪಕೇಂದ್ರಗಳಿಂದ ವರದಿಯಾಗಿದ್ದರ ಮೇರೆಗೆ ಸದರಿ ಅಭ್ಯರ್ಥಿಗಳಿಗೆ ಜಾರಿ ಮಾಡಲಾದ ಕಾರಣ ಕೇಳುವ ನೋಟೀಸುಗಳಿಗೆ ಅವರುಗಳು ತಮ್ಮ ಮೇಲಿನ ಆರೋಪವನ್ನು ನಿರಾಕರಿಸಿದ್ದರಿಂದ ಹಾಗೂ ಕೆಲ ಅಭ್ಯರ್ಥಿಗಳು ಸಮಜಾಯಿಷಿಗಳನ್ನು ಸಲ್ಲಿಸದೇ ಇದ್ದುದರಿಂದ ಈ ಕೆಳಕಂಡ ಅಭ್ಯರ್ಥಿಗಳಿಗೆ ವಿಚಾರಣೆಯನ್ನು ನಡೆಸಿ ಇವರುಗಳ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದೆಂದು ಹಾಗೂ ಕೆಲವು ಅಭ್ಯರ್ಥಿಗಳು ವಿಚಾರಣೆಗೆ ಗೈರು ಹಾಜರಾಗಿರುವರೆಂದು ವಿಚಾರಣಾಧಿಕಾರಿಗಳು ವರದಿಗಳನ್ನು ನೀಡಿರುತ್ತಾರೆ.

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ನೋಂದಣಿ ಸಂಖ್ಯೆ (ಶ್ರೀ/ಶ್ರೀಮತಿ) | ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ನೋಂದಣಿ ಸಂಖ್ಯೆ (ಶ್ರೀ/ಶ್ರೀಮತಿ) | ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ನೋಂದಣಿ ಸಂಖ್ಯೆ (ಶ್ರೀ/ಶ್ರೀಮತಿ) |
|---|---|---|---|---|---|
| 1 | 2 | 3 | 4 | 5 | 6 |
| 1. | ನಂಜುಂಡೇಶ್ ಪಿ.<br>117320 | 14. | ಅಮೃತಾಬಾಯಿ<br>324573 | 27. | ಶ್ರೀಶೈಲ<br>323673 |
| 2. | ರಿಯಾಜುದ್ದೀನ್<br>117575 | 15. | ಎಂ. ವಿನೋದ್ ಕುಮಾರ್<br>324101 | 28. | ಶ್ರೀದೇವಿ<br>323676 |
| 3. | ಮಹಮ್ಮದ್ ಆರೀಫ್ ಸಾರವಾಡ್<br>324107 | 16. | ಶಿವರಾಮ್<br>323663 | 29. | ಉಮಾದೇವಿ<br>323780 |
| 4. | ತಿಮ್ಮಪ್ಪ<br>323772 | 17. | ಸಂದೀಪ್ ಕುಮಾರ್<br>323538 | 30. | ಶಿರಿಯಾಳ ಪಿ ಪೂಜಾರ್<br>218657 |
| 5. | ತಿಪ್ಪಣ್ಣ<br>323774 | 18. | ರವಿಕುಮಾರ್ ನಾಯಕ್ ಎಲ್.<br>117551 | 31. | ಉಮಾಕಾಂತ್<br>323781 |
| 6. | ಸಾಯಬಣ್ಣ ದೇವರಮನಿ<br>323589 | 19. | ಶಂಕರಮ್ಮ ಇ.<br>112160 | 32. | ಸೈಯದ್ ಮಿಸ್‌ಬಾಹುದ್ದೀನ್ ಕಾದ್ರಿ<br>323762 |
| 7. | ಶೇಖರಪ್ಪ<br>218637 | 20. | ಸುಜಾತ<br>323725 | 33. | ಮಂಜುಳೇಶ ಪೈ<br>120999 |

| | | | | | |
|---|---|---|---|---|---|
| 8. | ಶರಣಗೌಡ ಎಂ. ಪಾಟೀಲ್ 324370 | 21. | ಸಂತೋಷ್ ಕುಮಾರ್ ಸ್ವಾಮಿ 323564 | 34. | ಹೇಮಾವತಿ ಎ. 103164 |
| 9. | ರಾಜಶೇಖರ್ ಕಾಳಶೆಟ್ಟಿ 323443 | 22. | ವಸಂತ್ 323795 | 35. | ತಾರಾ ಎಸ್. 104089 |
| 10. | ಕಲೀಂ ಪಾಷ 324060 | 23. | ಸುಹಾಸಿನಿ 323723 | 36. | ಪವನ್ ಕುಮಾರ್ ಎನ್. 122138 |
| 11. | ತಾರಾನಾಥ್ 323768 | 24. | ಸುನೀತ 323739 | 37. | ಸಂಜೀವ ಕುಮಾರ್ 323552 |
| 12. | ಶಮಸೂರ್ ಸಾಬ್ 323602 | 25. | ಅಮೀತ್ ಕುಮಾರ್ 324572 | 38. | ಶೆಟ್ಟಪ್ಪ ಪಂಡ್ರೋಳಿ 218639 |
| 13. | ಸುನಿತ ಚೌಹಾಣ್ 323741 | 26. | ಸುಕನ್ಯಾ 323727 | 39. | ಶ್ರೀನಿವಾಸ ದೇವೇಂದ್ರಪ್ಪ 323682 |

**ಆದೇಶ ಸಂಖ್ಯೆ : ಆರ್ (4)63-101/15-16/ಪಿಎಸ್‌ಸಿ, ಬೆಂಗಳೂರು, ದಿನಾಂಕ : 08-07-2015**

ವಿಚಾರಣಾಧಿಕಾರಿಗಳು ನೀಡಿರುವ ವರದಿಗಳನ್ನು ಪರಿಶೀಲಿಸಿ, ಕರ್ನಾಟಕ ಲೋಕಾಸೇವಾ ಆಯೋಗವು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ-20 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದುರಾಚಾರ ಪ್ರಕರಣಗಳಲ್ಲಿ ಆರೋಪ ಸಾಬೀತಾದ ಹಾಗೂ ವಿಚಾರಣೆಗೆ ಗೈರು ಹಾಜರಾದ ಮೇಲ್ಕಂಡ ಅಭ್ಯರ್ಥಿಗಳಿಗೆ ಸದರಿ ಪರೀಕ್ಷೆಯಿಂದ ಹಾಗೂ ಈ ಆದೇಶದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಆಯೋಗವು ನಡೆಸುವ ಯಾವುದೇ ಪರೀಕ್ಷೆಯಿಂದ ಡಿಬಾರ್ ಮಾಡುವ ದಂಡನೆಯನ್ನು ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ,
**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು-560001.

## ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು, ಬೆಂಗಳೂರು

**ವಿಷಯ :** ಆಯೋಗದ ದಿನಾಂಕ : 25-09-2014ರ ಅಧಿಸೂಚನೆಯಲ್ಲಿ ಅಧಿಸೂಚಿಸಿದ ವಿವಿಧ ತಾಂತ್ರಿಕ/ತಾಂತ್ರಿಕೇತರ ಹುದ್ದೆಗಳ ನೇಮಕಾತಿಗೆ ದಿನಾಂಕ : 06-12-2014 ರಿಂದ 08-12-2014 ಮತ್ತು 14-12-2014 ರಂದು ನಡೆದ ಸ್ಪರ್ಧಾತ್ಮಕ ಪರೀಕ್ಷೆ/ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಗಳಲ್ಲಿ ದುರಾಚಾರ ಎಸಗಿರುವ ಅಭ್ಯರ್ಥಿಗಳಿಗೆ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ :**
1. ಆಯೋಗದ ದಿನಾಂಕ : 13-01-2015 ಹಾಗೂ 24-01-2015ರ ಕಾರಣ ಕೇಳುವ ನೋಟೀಸ್‌ಗಳು.
2. ವಿಚಾರಣಾಧಿಕಾರಿಗಳ ವರದಿಗಳ ದಿನಾಂಕ : 27-05-2015 ಮತ್ತು 29-05-2015.

**ಪ್ರಸ್ತಾವನೆ :**

ಆಯೋಗವು ಸರ್ಕಾರದ ವಿವಿಧ ಇಲಾಖೆಗಳಲ್ಲಿನ ತಾಂತ್ರಿಕ/ತಾಂತ್ರಿಕೇತರ ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ 2014ರ ಡಿಸೆಂಬರ್ ಮಾಹೆಯಲ್ಲಿ ನಡೆಸಿದ ಸ್ಪರ್ಧಾತ್ಮಕ/ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಗಳಲ್ಲಿ ಕೆಳಕಂಡ ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯಲ್ಲಿ ಪ್ರಶ್ನೆಪತ್ರಿಕೆಗಳ ಪ್ಯಾಕೆಟ್‌ನ್ನು ಅವರ ಮುಂದೆ ತೆರೆದಿರುವುದಿಲ್ಲವೆಂದು ಆಕ್ಷೇಪಿಸಿ ಅನಗತ್ಯ ಗೊಂದಲವನ್ನುಂಟು ಮಾಡಿ ಇತರೆ ಅಭ್ಯರ್ಥಿಗಳಿಗೂ ತೊಂದರೆಯುಂಟು ಮಾಡಿರುವ ಬಗ್ಗೆ ಪರೀಕ್ಷಾ ಉಪಕೇಂದ್ರಗಳಿಂದ ವರದಿಯಾಗಿದ್ದರ ಮೇರೆಗೆ ಸದರಿ ಅಭ್ಯರ್ಥಿಗಳಿಗೆ ಜಾರಿ ಮಾಡಲಾದ ಕಾರಣ ಕೇಳುವ ನೋಟೀಸುಗಳಿಗೆ ಅವರುಗಳು ತಮ್ಮ ಮೇಲಿನ ಆರೋಪವನ್ನು ನಿರಾಕರಿಸಿದ್ದರಿಂದ ಇವರುಗಳಿಗೆ ವಿಚಾರಣೆಯನ್ನು ನಡೆಸಿ ವಿಚಾರಣಾಧಿಕಾರಿಗಳು ಇವರುಗಳ ವಿರುದ್ಧದ ಆರೋಪವು ಸಾಬೀತಾಗಿರುವುದಿಲ್ಲ ಎಂಬುದಾಗಿ ವರದಿ ನೀಡಿರುತ್ತಾರೆ.

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ನೋಂದಣಿ ಸಂಖ್ಯೆ (ಶ್ರೀ/ಶ್ರೀಮತಿ) |
|---|---|
| **1** | **2** |
| 1. | ಸುನಿತ ದೇಗಿನಾಳ್ 323738 |
| 2. | ವೈಶಾಲಿ 323790 |

**ಆದೇಶ ಸಂಖ್ಯೆ : ಆರ್ (4) 102–103/15–16/ಪಿಎಸ್‌ಸಿ, ಬೆಂಗಳೂರು, ದಿನಾಂಕ : 08–07–2015**

ವಿಚಾರಣಾಧಿಕಾರಿಗಳು ನೀಡಿರುವ ವರದಿಗಳನ್ನು ಪರಿಶೀಲಿಸಿ, ಕರ್ನಾಟಕ ಲೋಕಸೇವಾ ಆಯೋಗವು ಮೇಲ್ಕಂಡ ಅಭ್ಯರ್ಥಿಗಳ ವಿರುದ್ಧದ ಆರೋಪವು ಸಾಬೀತಾಗದೇ ಇರುವುದರಿಂದ ಇವರುಗಳ ವಿರುದ್ಧದ ಆರೋಪವನ್ನು ಕೈಬಿಟ್ಟು ನೇಮಕಾತಿಯ ಮುಂದಿನ ಪ್ರಕ್ರಿಯೆಗೆ ಪರಿಗಣಿಸಿದೆ.

P.R. 735

SC-50

ಆಯೋಗದ ಆದೇಶದ ಮೇರೆಗೆ,
**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು–560001.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ

**ದಾವಾ ಸಂಖ್ಯೆ:– ಜೆಆರ್‌ಬಿ/ದಾವಾ/131/2015–16**

| ವಾದಿ ವಿರುದ್ಧ | ಪ್ರತಿವಾದಿ |
|---|---|
| ಮಹಾಲಕ್ಷ್ಮೀಪುರಂ ಶ್ರೀ ವಾಸವಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ.,<br>ನಂ–88ಜಿ, 13ನೇ ಅಡ್ಡ ರಸ್ತೆ, ಮಹಾಲಕ್ಷ್ಮಿ ಲೇಔಟ್,<br>ಬೆಂಗಳೂರು–560086.<br>**ಪರ ವಕೀಲರು :**<br>ಶ್ರೀ ಎಂ. ಚಿದಾನಂದ ಮೂರ್ತಿ. | 1. ಶ್ರೀ ಚೆಲುವರಾಜ್ ಪಿ.ವಿ.<br>2. ಶ್ರೀ ಅಶ್ವಿನ್ ಕುಮಾರ್ ಪಿ.ಸಿ.<br>3. ಶ್ರೀ ರಾಘವೇಂದ್ರ ಪಿ.ಸಿ.<br>ಮೇಲಿನ ಪ್ರತಿವಾದಿಗಳ ವಿಳಾಸ :<br>ನಂ. 234, 19ನೇ 'ಇ' ಮುಖ್ಯ ರಸ್ತೆ, 1ನೇ 'ಎನ್' ಬ್ಲಾಕ್,<br>ರಾಜಾಜಿನಗರ, ಬೆಂಗಳೂರು–560010. |

**ಸಹಕಾರಿ ಸಂಘಗಳ ಕಾಯ್ದೆ 1959 ಕಲಂ 103 ರಡಿ ಆದೇಶ ಪೂರ್ವ ಜಪ್ತಿ ನೋಟೀಸ್**

ಅರ್ಜಿದಾರರು ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿಯಲ್ಲಿ ದಾವಾ ಅರ್ಜಿಯನ್ನು ಸಲ್ಲಿಸುತ್ತಾ 1ನೇ ಪ್ರತಿವಾದಿಯು ವಾದಿ ಸಂಘದಿಂದ ಪಡೆದಿರುವ ಅವಧಿ ಅಡಮಾನ ಸಾಲದ ಮೊತ್ತವನ್ನು ಸಕಾಲದಲ್ಲಿ ಮರುಪಾವತಿಸದೇ, ಸುಸ್ತಿದಾರರಾಗಿದ್ದು, ದಾವಾ ದಾಖಲು ಮಾಡುವ ದಿನಾಂಕಕ್ಕೆ ರೂ. 21,04,281–00 (ಇಪ್ಪತ್ತೊಂದು ಲಕ್ಷದ ನಾಲ್ಕು ಸಾವಿರದ ಎರಡು ನೂರ ಎಂಭತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಬಾಕಿದಾರರಾಗಿರುತ್ತಾರೆ. ಈ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಆದೇಶ ಹೊರಡಿಸಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ. ಹಾಗೂ ದಾವಾ ಅರ್ಜಿಯೊಂದಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿ ಪ್ರಮಾಣ ಪತ್ರದೊಂದಿಗೆ ಅರ್ಜಿ ಸಲ್ಲಿಸಿ ಒಂದನೇ ಪ್ರತಿವಾದಿಯು ಅದನ್ನು ಮಾರಾಟ ಮಾಡದಂತೆ ಆದೇಶಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ದಾವಾ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ ಹಾಗೂ ಅರ್ಜಿದಾರರು ಸಲ್ಲಿಸಿರುವ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಅರ್ಜಿಯ ಜೊತೆಗಿನ ಪ್ರಮಾಣ ಪತ್ರವನ್ನು ಅವಲೋಕಿಸಲಾಗಿದೆ ಹಾಗೂ ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಲಾಗಿದೆ.

ಅರ್ಜಿದಾರರು ಒಂದನೇ ಪ್ರತಿವಾದಿಗೆ ಸಾಲ ನೀಡಿರುವುದು ದಾಖಲಾತಿಗಳಿಂದ ಕಂಡು ಬಂದಿರುತ್ತದೆ. ಹಾಗೂ ಈ ಸಾಲದ ಮೊತ್ತ ಸಂಪೂರ್ಣವಾಗಿ ಪಾವತಿಯಾಗದೇ ಸುಸ್ತಿಯಾಗಿರುವುದು ಸಹ ವಾದಿಯು ಈ ನ್ಯಾಯಾಲಯದ ಗಮನಕ್ಕೆ ವಿವರಿಸಿರುತ್ತಾರೆ. ವಾದಿಯು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸದಿದ್ದ ಪಕ್ಷದಲ್ಲಿ ಒಂದನೇ ಪ್ರತಿವಾದಿಯು ಸದರಿ ಸ್ವತ್ತುಗಳನ್ನು ಮಾರುವ ಸಂಭವವಿದ್ದು ಒಂದನೇ ಪ್ರತಿವಾದಿ ಹೊಂದಿರುವ ಜವಾಬ್ದಾರಿ ಆದರಿಸಿ ವಾದಿಗೆ ಬರಬೇಕಾಗಿರುವ ಸಾಲ ವಸೂಲಾತಿ ಕಷ್ಟ ಸಾಧ್ಯವಾಗಿರುವ ಕಾರಣ ಈ ಆಸ್ತಿಯನ್ನು ಮಾರದಂತೆ, ಬೇರೆಯವರಿಗೆ ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರ ಅವಕಾಶಗಳಿಗೆ ಒಳಪಟ್ಟು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ : 139 : ಸಿ.ಎಲ್.ಎಂ. : 2010, ದಿನಾಂಕ : 17–2–2011 ರಲ್ಲಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ಪ್ರಕರಣದ ಒಂದನೇ ಪ್ರತಿವಾದಿಯು ಹೊಂದಿರುವ ಆಸ್ತಿಯನ್ನು ಬೇರೆಯವರಿಗೆ ಮಾರದಂತೆ, ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಒಂದನೇ ಪ್ರತಿವಾದಿಗೆ ಆದೇಶಿಸಿ, ಆದೇಶಪೂರ್ವ ಜಪ್ತಿ ಆದೇಶವನ್ನು ಹೊರಡಿಸಿರುತ್ತೇನೆ.

ಒಂದನೇ ಪ್ರತಿವಾದಿಯು ಒಂದು ವೇಳೆ ಈ ಆದೇಶಪೂರ್ವ ಜಪ್ತಿ ಆದೇಶದಿಂದ ತನ್ನನ್ನು ಮುಕ್ತ ಮಾಡಿಕೊಳ್ಳಲು ಇಚ್ಛಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಮ್ ಮಾಡಿರುವ ಮೊತ್ತ ರೂ. 21,04,281–00 (ಇಪ್ಪತ್ತೊಂದು ಲಕ್ಷದ ನಾಲ್ಕು ಸಾವಿರದ ಎರಡು ನೂರ ಎಂಬತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ವಾದಿ ಸಂಘದ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಬಡ್ಡಿ ಸಮೇತ ಜಮಾ ಮಾಡಿ ಅಧಿಕೃತ ರಸೀದಿಯನ್ನು/ಚಲನ್ ಅನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿದಲ್ಲಿ ಈ ಷರತ್ತುಬದ್ಧ ಆದೇಶದಿಂದ ಮುಕ್ತಗೊಳಿಸಲಾಗುವುದು.

**ಷೆಡ್ಯೂಲ್ ಸ್ವತ್ತಿನ ವಿವರ**

All that piece and parcel of the property bearing municipal No-234/11 khatha no. 11/1, 19th E main Road, 1st Block, Rajajinagar, Bengaluru now comes under BBMP Limit Bengaluru having in PID No. 14-44-11 1, messuring East to West 15 feet, and North to South 25 feet and bounderis as follows.

East by : Road

West by : Property bearing No. 234 belongings to M.N. Somasundara.

North by : Road

South by : Property bearing No. 235.

ಒಂದು ವೇಳೆ ಒಂದನೇ ಪ್ರತಿವಾದಿಯು ಮೇಲೆ ತಿಳಿಸಿರುವ ಷರತ್ತಿನಂತೆ ಕ್ಲೇಮ್ ಮೊತ್ತವನ್ನು 30 ದಿನಗಳೊಳಗಾಗಿ ವಾದಿ ಸಂಘಕ್ಕೆ ಪಾವತಿಸಲು ವಿಫಲರಾದಲ್ಲಿ ಈ ಆದೇಶ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ : 24-06-2015ರಂದು ಹೊರಡಿಸಲಾಗಿದೆ.

**P.R. 750**

**SC-10**

**ಡಿ. ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಜಂಟಿ ನಿಬಂಧಕರು ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ.

**ದಾವಾ ಸಂಖ್ಯೆ:- ಜೆಆರ್‌ಬಿ/ದಾವಾ/132/2015-16**

| ವಾದಿ | ವಿರುದ್ಧ | ಪ್ರತಿವಾದಿ |
|---|---|---|
| ಮಹಾಲಕ್ಷ್ಮೀಪುರಂ ಶ್ರೀವಾಸವಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ.,<br>ನಂ-88ಜಿ, 13ನೇ ಅಡ್ಡ ರಸ್ತೆ, ಮಹಾಲಕ್ಷ್ಮಿ ಲೇಔಟ್,<br>ಬೆಂಗಳೂರು-560086.<br>**ಪರ ವಕೀಲರು :**<br>ಶ್ರೀ ಎಂ. ಚಿದಾನಂದ ಮೂರ್ತಿ. | | 1. ಶ್ರೀ ವೆಂಕಟರಮಣರಾಜು ಎಂ.<br>2. ಕರುಣ ಸಾಗರ್ ಎಂ.ವಿ.<br>ಮೇಲಿನ ಪ್ರತಿವಾದಿಗಳ ವಿಳಾಸ :<br>ನಂ. 56, 1ನೇ 'ಎ' ಕ್ರಾಸ್, 11ನೇ ಬ್ಲಾಕ್, ಮರಿಲಿಂಗಪ್ಪ ಲೇಔಟ್, ಪಾಪಿರೆಡ್ಡಿಪಾಳ್ಯ, 2ನೇ ಹಂತ, ನಾಗರಬಾವಿ, ಬೆಂಗಳೂರು-560072. |

**ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 ರಡಿ ಆದೇಶ ಪೂರ್ವ ಜಪ್ತಿ ನೋಟೀಸ್**

ಅರ್ಜಿದಾರರು ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿಯಲ್ಲಿ ದಾವಾ ಅರ್ಜಿಯನ್ನು ಸಲ್ಲಿಸುತ್ತಾ 1ನೇ ಪ್ರತಿವಾದಿಯು ವಾದಿ ಸಂಘದಿಂದ ಪಡೆದಿರುವ ಅವಧಿ ಅಡಮಾನ ಸಾಲದ ಮೊತ್ತವನ್ನು ಸಕಾಲದಲ್ಲಿ ಮರುಪಾವತಿಸದೇ, ಸುಸ್ತಿದಾರರಾಗಿದ್ದು, ದಾವಾ ದಾಖಲು ಮಾಡುವ ದಿನಾಂಕಕ್ಕೆ ರೂ. 12,04,344-00 (ಹನ್ನೆರಡು ಲಕ್ಷದ ನಾಲ್ಕು ಸಾವಿರದ ಮುನ್ನೂರಾ ನಲವತ್ತು ನಾಲ್ಕು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಬಾಕಿದಾರರಾಗಿರುತ್ತಾರೆ. ಈ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಆದೇಶ ಹೊರಡಿಸಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ. ಹಾಗೂ ದಾವಾ ಅರ್ಜಿಯೊಂದಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿ ಪ್ರಮಾಣ ಪತ್ರದೊಂದಿಗೆ ಅರ್ಜಿ ಸಲ್ಲಿಸಿ ಒಂದನೇ ಪ್ರತಿವಾದಿಯು ಅದನ್ನು ಮಾರಾಟ ಮಾಡದಂತೆ ಆದೇಶ ಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ದಾವಾ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ ಹಾಗೂ ಅರ್ಜಿದಾರರು ಸಲ್ಲಿಸಿರುವ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಅರ್ಜಿಯ ಜೊತೆಗಿನ ಪ್ರಮಾಣ ಪತ್ರವನ್ನು ಅವಲೋಕಿಸಲಾಗಿದೆ ಹಾಗೂ ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಲಾಗಿದೆ.

ಅರ್ಜಿದಾರರು ಒಂದನೇ ಪ್ರತಿವಾದಿಗೆ ಸಾಲ ನೀಡಿರುವುದು ದಾಖಲಾತಿಗಳಿಂದ ಕಂಡು ಬಂದಿರುತ್ತದೆ. ಹಾಗೂ ಈ ಸಾಲದ ಮೊತ್ತ ಸಂಪೂರ್ಣವಾಗಿ ಪಾವತಿಯಾಗದೇ ಸುಸ್ತಿಯಾಗಿರುವುದು ಸಹ ವಾದಿಯು ಈ ನ್ಯಾಯಾಲಯದ ಗಮನಕ್ಕೆ ವಿವರಿಸಿರುತ್ತಾರೆ. ವಾದಿಯು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸದಿದ್ದ ಪಕ್ಷದಲ್ಲಿ ಒಂದನೇ ಪ್ರತಿವಾದಿಯು ಸದರಿ ಸ್ವತ್ತುಗಳನ್ನು ಮಾರುವ ಸಂಭವವಿದ್ದು ಒಂದನೇ ಪ್ರತಿವಾದಿ ಹೊಂದಿರುವ ಜವಾಬ್ದಾರಿ ಆದರಿಸಿ ವಾದಿಗೆ ಬರಬೇಕಾಗಿರುವ ಸಾಲ ವಸೂಲಾತಿ ಕಷ್ಟ ಸಾಧ್ಯವಾಗಿರುವ ಕಾರಣ ಈ ಆಸ್ತಿಯನ್ನು ಮಾರದಂತೆ, ಬೇರೆಯವರಿಗೆ ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರ ಅವಕಾಶಗಳಿಗೆ ಒಳಪಟ್ಟು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ : 139 : ಸಿ.ಎಲ್.ಎಂ. : 2010, ದಿನಾಂಕ : 17-2-2011ರಲ್ಲಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ಪ್ರಕರಣದ ಒಂದನೇ ಪ್ರತಿವಾದಿಯು ಹೊಂದಿರುವ ಆಸ್ತಿಯನ್ನು ಬೇರೆಯವರಿಗೆ ಮಾರದಂತೆ, ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಒಂದನೇ ಪ್ರತಿವಾದಿಗೆ ಆದೇಶಿಸಿ, ಆದೇಶಪೂರ್ವ ಜಪ್ತಿ ಆದೇಶವನ್ನು ಹೊರಡಿಸಿರುತ್ತೇನೆ.

ಒಂದನೇ ಪ್ರತಿವಾದಿಯು ಒಂದು ವೇಳೆ ಈ ಆದೇಶಪೂರ್ವ ಜಪ್ತಿ ಆದೇಶದಿಂದ ತನ್ನನ್ನು ಮುಕ್ತ ಮಾಡಿಸಿ ಕೊಳ್ಳಲು ಇಚ್ಛಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಮ್ ಮಾಡಿರುವ ಮೊತ್ತ ರೂ. 12,04,344–00 (ಹನ್ನೆರಡು ಲಕ್ಷದ ನಾಲ್ಕು ಸಾವಿರದ ಮುನ್ನೂರಾ ನಲವತ್ತು ನಾಲ್ಕು ರೂಪಾಯಿಗಳು ಮಾತ್ರ) ಗಳನ್ನು ವಾದಿ ಸಂಘದ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಬಡ್ಡಿ ಸಮೇತ ಜಮಾ ಮಾಡಿ ಅಧಿಕೃತ ರಸೀದಿಯನ್ನು/ಚಲನ್ ಅನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿದಲ್ಲಿ ಈ ಷರತ್ತುಬದ್ಧ ಆದೇಶದಿಂದ ಮುಕ್ತಿಗೊಳಿಸಲಾಗುವುದು.

**ಷೆಡ್ಯೂಲ್ ಸ್ವತ್ತಿನ ವಿವರಗಳು**

ಬೆಂಗಳೂರು ಮಹಾನಗರ ಪಾಲಿಕೆಯ 11ನೇ ವಾರ್ಡಿಗೆ ಸೇರಿದ ಹಾಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಸೇರಿರುವ ಡಿ ದೇವರಾಜ ಅರಸ್ ಟ್ರಕ್ ಟರ್ಮಿನಲಸ್ ರವರು ವಿಗಂಡಿಸಿರುವ ಯಶವಂತಪುರ ಕೈಗಾರಿಕಾ ಉಪನಗರ 2ನೇ ಹಂತದಲ್ಲಿರುವ ಮತ್ತು ನನ್ನ ಹೆಸರಿನ ಖಾತಾ ಪ್ರಕಾರ ಕಂಠೀರವ ಸ್ಟುಡಿಯೋ ಮುಖ್ಯರಸ್ತೆಯಲ್ಲಿರುವ ಸಿ–35 ಹೊಸ ನಂ. 26, ಸ್ವತ್ತಿನ ಗುರುತಿನ ಸಂಖ್ಯೆ (ಪಿಐಡಿ) 11–61–26 ಈ ಸ್ವತ್ತಿಗೆ ಚಕ್ಕುಬಂಧಿ :

ಪೂರ್ವ : ನಿವೇಶನ ಸಂ. ಸಿ–36

ಪಶ್ಚಿಮ : ರಸ್ತೆ

ಉತ್ತರ : ನಿವೇಶನ ಸಂ. ಡಿ–21

ದಕ್ಷಿಣ : ರಸ್ತೆ

ಈ ಮಧ್ಯಯಿರುವ ಪೂರ್ವ–ಪಶ್ಚಿಮ 4 ಮೀ.ಗಳು ಉತ್ತರ–ದಕ್ಷಿಣ 18.75 ಮೀ.ಗಳು ಒಟ್ಟು 75 ಚದರ ಮೀ.ಗಳು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ : 24–06–2015ರಂದು ಹೊರಡಿಸಿರುತ್ತೇನೆ.

**P.R. 751**

**SC-10**

**ಡಿ. ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರು ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ:– ಜೆಆರ್‌ಬಿ/ದಾವಾ/133/2015–16**

| ವಾದಿ | ವಿರುದ್ಧ | ಪ್ರತಿವಾದಿ |
|---|---|---|
| ಮಹಾಲಕ್ಷ್ಮೀಪುರಂ ಶ್ರೀ ವಾಸವಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ.,<br>ನಂ–88ಜಿ, 13ನೇ ಅಡ್ಡ ರಸ್ತೆ, ಮಹಾಲಕ್ಷ್ಮಿ ಲೇಔಟ್,<br>ಬೆಂಗಳೂರು–560086.<br>**ಪರ ವಕೀಲರು :**<br>ಶ್ರೀ ಎಂ. ಚಿದಾನಂದ ಮೂರ್ತಿ. | | 1. ಶ್ರೀಮತಿ ಸುಶೀಲರಂಗಯ್ಯ<br>2. ಶ್ರೀ ಸುಮಂತ್ ಆರ್.<br>3. ಶ್ರೀ ರಾಮಚಂದ್ರಯ್ಯ ಕೆ.ಹೆಚ್.<br>4. ಶ್ರೀಮತಿ ಸ್ಮಿತಾ ಸಿ.ಆರ್.<br>ಮೇಲಿನ ಪ್ರತಿವಾದಿಗಳ ವಿಳಾಸ :<br>ನಂ. 791, 2ನೇ ಹಂತ, 9ನೇ ಬ್ಲಾಕ್, 7ನೇ ಮುಖ್ಯ ರಸ್ತೆ, ನಾಗರಬಾವಿ, ಬೆಂಗಳೂರು–560072. |

**ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 ರಡಿ ಆದೇಶ ಪೂರ್ವ ಜಪ್ತಿ ನೋಟೀಸ್**

ಅರ್ಜಿದಾರರು ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿಯಲ್ಲಿ ದಾವಾ ಅರ್ಜಿಯನ್ನು ಸಲ್ಲಿಸುತ್ತಾ 1ನೇ ಪ್ರತಿವಾದಿಯು ವಾದಿ ಸಂಘದಿಂದ ಪಡೆದಿರುವ ಅವಧಿ ಅಡಮಾನ ಸಾಲದ ಮೊತ್ತವನ್ನು ಸಕಾಲದಲ್ಲಿ ಮರುಪಾವತಿಸದೇ, ಸುಸ್ತಿದಾರರಾಗಿದ್ದು, ದಾವಾ ದಾಖಲು ಮಾಡುವ ದಿನಾಂಕಕ್ಕೆ ರೂ. 53,44,556–00 (**ಐವತ್ತು ಮೂರು ಲಕ್ಷದ ನಲವತ್ತು ನಾಲ್ಕು ಸಾವಿರದ ಐದುನೂರಾ ಐವತ್ತಾರು ರೂಪಾಯಿಗಳು ಮಾತ್ರ**) ಗಳನ್ನು ಪಾವತಿಸಲು ಬಾಕಿದಾರರಾಗಿರುತ್ತಾರೆ. ಈ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಆದೇಶ ಹೊರಡಿಸಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ. ಹಾಗೂ ದಾವಾ ಅರ್ಜಿಯೊಂದಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿ ಪ್ರಮಾಣ ಪತ್ರದೊಂದಿಗೆ ಅರ್ಜಿ ಸಲ್ಲಿಸಿ ಒಂದನೇ ಪ್ರತಿವಾದಿಯು ಅದನ್ನು ಮಾರಾಟ ಮಾಡದಂತೆ ಆದೇಶಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ದಾವಾ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ ಹಾಗೂ ಅರ್ಜಿದಾರರು ಸಲ್ಲಿಸಿರುವ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಅರ್ಜಿಯ ಜೊತೆಗಿನ ಪ್ರಮಾಣ ಪತ್ರವನ್ನು ಅವಲೋಕಿಸಲಾಗಿದೆ ಹಾಗೂ ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಲಾಗಿದೆ.

ಅರ್ಜಿದಾರರು ಒಂದನೇ ಪ್ರತಿವಾದಿಗೆ ಸಾಲ ನೀಡಿರುವುದು ದಾಖಲಾತಿಗಳಿಂದ ಕಂಡು ಬಂದಿರುತ್ತದೆ. ಹಾಗೂ ಈ ಸಾಲದ ಮೊತ್ತ ಸಂಪೂರ್ಣವಾಗಿ ಪಾವತಿಯಾಗದೇ ಸುಸ್ತಿಯಾಗಿರುವುದು ಸಹ ವಾದಿಯು ಈ ನ್ಯಾಯಾಲಯದ ಗಮನಕ್ಕೆ ವಿವರಿಸಿರುತ್ತಾರೆ. ವಾದಿಯು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸದಿದ್ದ ಪಕ್ಷದಲ್ಲಿ ಒಂದನೇ ಪ್ರತಿವಾದಿಯು ಸದರಿ ಸ್ವತ್ತುಗಳನ್ನು ಮಾರುವ ಸಂಭವವಿದ್ದು

ಒಂದನೇ ಪ್ರತಿವಾದಿ ಹೊಂದಿರುವ ಜವಾಬ್ದಾರಿ ಆದರಿಸಿ ವಾದಿಗೆ ಬರಬೇಕಾಗಿರುವ ಸಾಲ ವಸೂಲಾತಿ ಕಷ್ಟ ಸಾಧ್ಯವಾಗಿರುವ ಕಾರಣ ಈ ಆಸ್ತಿಯನ್ನು ಮಾರದಂತೆ, ಬೇರೆಯವರಿಗೆ ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರ ಅವಕಾಶಗಳಿಗೆ ಒಳಪಟ್ಟು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಟಿ : 139 : ಸಿ.ಎಲ್.ಎಂ. : 2010, ದಿನಾಂಕ : 17–2–2011ರಲ್ಲಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ಪ್ರಕರಣದ ಒಂದನೇ ಪ್ರತಿವಾದಿಯು ಹೊಂದಿರುವ ಆಸ್ತಿಯನ್ನು ಬೇರೆಯವರಿಗೆ ಮಾರದಂತೆ, ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಒಂದನೇ ಪ್ರತಿವಾದಿಗೆ ಆದೇಶಿಸಿ, ಆದೇಶಪೂರ್ವ ಜಪ್ತಿ ಆದೇಶವನ್ನು ಹೊರಡಿಸಿರುತ್ತೇನೆ.

ಒಂದನೇ ಪ್ರತಿವಾದಿಯು ಒಂದು ವೇಳೆ ಈ ಆದೇಶಪೂರ್ವ ಜಪ್ತಿ ಆದೇಶದಿಂದ ತನ್ನನ್ನು ಮುಕ್ತ ಮಾಡಿ ಕೊಳ್ಳಲು ಇಚ್ಛಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಮ್ ಮಾಡಿರುವ ಮೊತ್ತ ರೂ. 53,44,556–00 **(ಐವತ್ತು ಮೂರು ಲಕ್ಷದ ನಲವತ್ತು ನಾಲ್ಕು ಸಾವಿರದ ಐದುನೂರಾ ಐವತ್ತಾರು ರೂಪಾಯಿಗಳು ಮಾತ್ರ)** ಗಳನ್ನು ವಾದಿ ಸಂಘದ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಬಡ್ಡಿ ಸಮೇತ ಜಮಾ ಮಾಡಿ ಅಧಿಕೃತ ರಸೀದಿಯನ್ನು/ಚಲನ್ ಅನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿದಲ್ಲಿ ಈ ಷರತ್ತುಬದ್ಧ ಆದೇಶದಿಂದ ಮುಕ್ತಿಗೊಳಿಸಲಾಗುವುದು.

**ಷೆಡ್ಯೂಲ್ ಸ್ವತ್ತಿನ ವಿವರಗಳು**

ನಾಗರಭಾವಿ ಬಡಾವಣೆಯ 2ನೇ ಹಂತದ 9ನೇ ಬ್ಲಾಕ್‌ನಲ್ಲಿರುವ ಹಾಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಟ್ಟಿರುವ 791ನೇ ನಂಬರ್‌ವುಳ್ಳ ಮನೆ ಸಯಿತ ಸ್ವತ್ತಿಗೆ ಚಕ್ಕುಬಂಧಿ :

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ನಿವೇಶನ ಸಂ. 800 |
| ಉತ್ತರಕ್ಕೆ | : | ನಿವೇಶನ ಸಂ. 792 |
| ದಕ್ಷಿಣಕ್ಕೆ | : | ನಿವೇಶನ ಸಂ. 790 |

ಈ ಮಧ್ಯೆಯಿರುವ ಪೂರ್ವ–ಪಶ್ಚಿಮ 12.30 ಮೀ.ಗಳು ಮತ್ತು ಉತ್ತರ–ದಕ್ಷಿಣ 9.10 ಮೀ.ಗಳು ಒಟ್ಟು 111.93 ಚದರ ಮೀ.ಗಳು.

ಒಂದು ವೇಳೆ ಒಂದನೇ ಪ್ರತಿವಾದಿಯು ಮೇಲೆ ತಿಳಿಸಿರುವ ಷರತ್ತಿನಂತೆ ಕ್ಲೈಮ್ ಮೊತ್ತವನ್ನು 30 ದಿನಗಳೊಳಗಾಗಿ ವಾದಿ ಸಂಘಕ್ಕೆ ಪಾವತಿಸಲು ವಿಫಲರಾದಲ್ಲಿ ಈ ಆದೇಶ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ : 24–06–2015ರಂದು ಹೊರಡಿಸಲಾಗಿದೆ..

**P.R. 752**

**SC-10**

**ಡಿ. ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಜಂಟಿ ನಿಬಂಧಕರು ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ.

**ದಾವಾ ಸಂಖ್ಯೆ:– ಜೆಆರ್‌ಬಿ/ದಾವಾ/134/2015–16**

| ವಾದಿ | ವಿರುದ್ಧ | ಪ್ರತಿವಾದಿ |
|---|---|---|
| ಮಹಾಲಕ್ಷ್ಮೀಪುರಂ ಶ್ರೀವಾಸವಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ.,<br>ನಂ–88ಜಿ, 13ನೇ ಅಡ್ಡ ರಸ್ತೆ, ಮಹಾಲಕ್ಷ್ಮಿ ಲೇಔಟ್,<br>ಬೆಂಗಳೂರು–560086.<br>**ಪರ ವಕೀಲರು :**<br>ಶ್ರೀ ಎಂ. ಚಿದಾನಂದ ಮೂರ್ತಿ. | | 1. ಶ್ರೀಮತಿ ಭೈರಮ್ಮ ಹೆಚ್.ಆರ್.<br>2. ಶ್ರೀ ಶ್ರೀನಿವಾಸ್ ಜಿ.<br>ಮೇಲಿನ ಪ್ರತಿವಾದಿಗಳ ವಿಳಾಸ :<br>ನಂ. 5/3, 15ನೇ ಮುಖ್ಯ ರಸ್ತೆ, 4ನೇ ಬ್ಲಾಕ್, ನಂದಿನಿ ಲೇಔಟ್, ಬೆಂಗಳೂರು–560096. |

**ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 ರಡಿ ಆದೇಶ ಪೂರ್ವ ಜಪ್ತಿ ನೋಟೀಸ್**

ಅರ್ಜಿದಾರರು ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿಯಲ್ಲಿ ದಾವಾ ಅರ್ಜಿಯನ್ನು ಸಲ್ಲಿಸುತ್ತಾ 1ನೇ ಪ್ರತಿವಾದಿಯು ವಾದಿ ಸಂಘದಿಂದ ಪಡೆದಿರುವ ಅವಧಿ/ಅಡಮಾನ ಸಾಲದ ಮೊತ್ತವನ್ನು ಸಕಾಲದಲ್ಲಿ ಮರುಪಾವತಿಸದೇ, ಸುಸ್ತಿದಾರರಾಗಿದ್ದು, ದಾವಾ ದಾಖಲು ಮಾಡುವ ದಿನಾಂಕಕ್ಕೆ ರೂ. 24,47,623–00 **(ಇಪ್ಪತ್ನಾಲ್ಕು ಲಕ್ಷದ ನಲವತ್ತೇಳು ಸಾವಿರದ ಆರು ನೂರಾ ಇಪ್ಪತ್ಮೂರು ರೂಪಾಯಿಗಳು ಮಾತ್ರ)** ಗಳನ್ನು ಪಾವತಿಸಲು ಬಾಕಿದಾರರಾಗಿರುತ್ತಾರೆ. ಈ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಆದೇಶ ಹೊರಡಿಸಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ. ಹಾಗೂ ದಾವಾ ಅರ್ಜಿಯೊಂದಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿ ಪ್ರಮಾಣ ಪತ್ರದೊಂದಿಗೆ ಅರ್ಜಿ ಸಲ್ಲಿಸಿ ಒಂದನೇ ಪ್ರತಿವಾದಿಯು ಅದನ್ನು ಮಾರಾಟ ಮಾಡದಂತೆ ಆದೇಶ ಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ದಾವಾ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ ಹಾಗೂ ಅರ್ಜಿದಾರರು ಸಲ್ಲಿಸಿರುವ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಅರ್ಜಿಯ ಜೊತೆಗಿನ ಪ್ರಮಾಣ ಪತ್ರವನ್ನು ಅವಲೋಕಿಸಲಾಗಿದೆ ಹಾಗೂ ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಲಾಗಿದೆ.

ಅರ್ಜಿದಾರರು ಒಂದನೇ ಪ್ರತಿವಾದಿಗೆ ಸಾಲ ನೀಡುರುವುದು ದಾಖಲಾತಿಗಳಿಂದ ಕಂಡು ಬಂದಿರುತ್ತದೆ. ಹಾಗೂ ಈ ಸಾಲದ ಮೊತ್ತ ಸಂಪೂರ್ಣವಾಗಿ ಪಾವತಿಯಾಗದೇ ಸುಸ್ತಿಯಾಗಿರುವುದು ಸಹ ವಾದಿಯು ಈ ನ್ಯಾಯಾಲಯದ ಗಮನಕ್ಕೆ ವಿವರಿಸಿರುತ್ತಾರೆ. ವಾದಿಯು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸದಿದ್ದ ಪಕ್ಷದಲ್ಲಿ ಒಂದನೇ ಪ್ರತಿವಾದಿಯು ಸದರಿ ಸ್ವತ್ತುಗಳನ್ನು ಮಾರುವ ಸಂಭವವಿದ್ದು ಒಂದನೇ ಪ್ರತಿವಾದಿ ಹೊಂದಿರುವ ಜವಾಬ್ದಾರಿ ಆದರಿಸಿ ವಾದಿಗೆ ಬರಬೇಕಾಗಿರುವ ಸಾಲ ವಸೂಲಾತಿ ಕಷ್ಟ ಸಾಧ್ಯವಾಗಿರುವ ಕಾರಣ ಈ ಆಸ್ತಿಯನ್ನು ಮಾರದಂತೆ, ಬೇರೆಯವರಿಗೆ ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರ ಅವಕಾಶಗಳಿಗೆ ಒಳಪಟ್ಟು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ : 139 : ಸಿ.ಎಲ್.ಎಂ. : 2010, ದಿನಾಂಕ : 17-02-2011ರಲ್ಲಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ಪ್ರಕರಣದ ಒಂದನೇ ಪ್ರತಿವಾದಿಯು ಹೊಂದಿರುವ ಆಸ್ತಿಯನ್ನು ಬೇರೆಯವರಿಗೆ ಮಾರದಂತೆ, ಲೀಸ್‌ಗೆ ನೀಡದಂತೆ, ಬಾಡಿಗೆಗೆ ನೀಡದಂತೆ ಒಂದನೇ ಪ್ರತಿವಾದಿಗೆ ಆದೇಶಿಸಿ, ಆದೇಶಪೂರ್ವ ಜಪ್ತಿ ಆದೇಶವನ್ನು ಹೊರಡಿಸಿರುತ್ತೇನೆ.

ಒಂದನೇ ಪ್ರತಿವಾದಿಯು ಒಂದು ವೇಳೆ ಈ ಆದೇಶಪೂರ್ವ ಜಪ್ತಿ ಆದೇಶದಿಂದ ತನ್ನನ್ನು ಮುಕ್ತ ಮಾಡಿಸಿ ಕೊಳ್ಳಲು ಇಚ್ಛಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಮ್ ಮಾಡಿರುವ ಮೊತ್ತ ರೂ. 24,47,623-00 **(ಇಪ್ಪತ್ನಾಲ್ಕು ಲಕ್ಷದ ನಲವತ್ತೇಳು ಸಾವಿರದ ಆರು ನೂರಾ ಇಪ್ಪತ್ಮೂರು ರೂಪಾಯಿಗಳು ಮಾತ್ರ)** ಗಳನ್ನು ವಾದಿ ಸಂಘದ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಬಡ್ಡಿ ಸಮೇತ ಜಮಾ ಮಾಡಿ ಅಧಿಕೃತ ರಸೀದಿಯನ್ನು/ಚಲನ್ ಅನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿದಲ್ಲಿ ಈ ಷರತ್ತುಬದ್ಧ ಆದೇಶದಿಂದ ಮುಕ್ತಿಗೊಳಿಸಲಾಗುವುದು.

**ಷೆಡ್ಯೂಲ್ ಸ್ವತ್ತಿನ ವಿವರಗಳು**

ಬೆಂಗಳೂರು ನಗರ ನಂದಿನಿ ಬಡಾವಣೆ, ಜೈಮಾರುತಿ ನಗರ ಕೊಳಚೆ ಪ್ರದೇಶ ಲಗ್ಗೆರೆ ಸರ್ವೆ ನಂ. 15ರ ಪೈಕಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದವರು ರಚಿಸಿರುವ 838/ಎ ನಂಬರ್ ವುಳ್ಳ ಸ್ವತ್ತು ಬೆಂಗಳೂರು ಮಹಾನಗರ ಪಾಲಿಕೆ 12ನೇ ವಿಭಾಗಕ್ಕೆ ಸೇರಿದ್ದು. ಹಾಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ 43ನೇ ವಿಭಾಗ ನಂದಿನಿ ಬಡಾವಣೆ ಜೈಮಾರುತಿ ನಗರ 26ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, ಸ್ವತ್ತಿನ ಗುರುತಿನ ಸಂಖ್ಯೆ (ಪಿಐಡಿ) 12-148-838/ಎ ಮನೆ ಸಹಿತ ಮೂಲೆ ಸ್ವತ್ತಿಗೆ ಚಕ್ಕುಬಂಧಿ :

| | | |
|---|---|---|
| ಪೂರ್ವಕ್ಕೆ | : | ನಿವೇಶನ ಸಂ. 838/ಬಿ |
| ಪಶ್ಚಿಮಕ್ಕೆ | : | ನಿವೇಶನ ಸಂ. 838 |
| ಉತ್ತರಕ್ಕೆ | : | ರಸ್ತೆ |
| ದಕ್ಷಿಣಕ್ಕೆ | : | ರಸ್ತೆ |

ಈ ಮಧ್ಯೆಯಿರುವ ಪೂರ್ವ-ಪಶ್ಚಿಮ 4.57 ಮೀ.ಗಳು ಉತ್ತರ-ದಕ್ಷಿಣ 10.67 ಮೀ.ಗಳು ಒಟ್ಟು 48.76 ಚದರ ಮೀ.ಗಳು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ : 24-06-2015ರಂದು ಹೊರಡಿಸಿರುತ್ತೇನೆ.

**P.R. 753**
**SC-10**

**ಡಿ. ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**ಕ್ರ.ಸಂ:ಎಸ್1/ಸಿಪಿಸಿ/ಸಿಆರ್-17/2003-04, ಕಾರವಾರ, ದಿನಾಂಕ: 24-07-2015.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ,
ಮಾಸ್ತಿಕಟ್ಟಾ.
(ಸರ್ಕಾರದ ಪರವಾಗಿ ಕಾನೂನು ಅಧಿಕಾರಿಗಳು (ಕಿ), ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ಗೋವಿಂದ ಬೇಡು ನಾಯ್ಕ
ಸಾ: ಹನುಮಟ್ಟಾ, ವಂದಿಗೆ
ತಾಲ್ಲೂಕು: ಅಂಕೋಲಾ,
ಜಿಲ್ಲೆ: ಉತ್ತರಕನ್ನಡ.
(ಅರ್ಜಿದಾರರ ಪರವಾಗಿ ಶ್ರೀ. ಚರಣ ಡಿ. ನಾಯ್ಕ ವಕೀಲರು)

ಪ್ರಸ್ತಾವನೆ :

1. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 21–02–2004 ರಂದು ವರದಿ ಸಲ್ಲಿಸುತ್ತಾ ದಿನಾಂಕ: 19–02–2014 ರಂದು ರಾತ್ರಿ 10 ಘಂಟೆ ಸುಮಾರಿಗೆ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರಿಗೆ ಕೆಎ–30/251 ನಾಗೇಶ ಮಹಾಲಕ್ಷ್ಮಿ ವಾಹನದ ಮೇಲೆ ಸುಂಕಸಾಳ ಶಾಖಾ ಹದ್ದಿಯಲ್ಲಿ ಅನಧಿಕೃತವಾಗಿ ಸಾಗ ತುಂಡುಗಳನ್ನು ಸಾಗಿಸುವ ಕುರಿತು ಬಾತ್ಮಿ ಬಂದ ಮೇರೆಗೆ ರಾತ್ರಿ ಗಸ್ತಿನಲ್ಲಿದ್ದ ಸಿಬ್ಬಂದಿಗಳಾದ ಶಾಖಾ ವನಪಾಲಕ ಮಾಸ್ತಿಕಟ್ಟಾ, ಅರಣ್ಯ ರಕ್ಷಕ ಅಗಸೂರು, ಶಾಖಾ ವನಪಾಲಕ ಸುಂಕಸಾಳ, ಅರಣ್ಯರಕ್ಷಕ ಸುಂಕಸಾಳ ಇವರನ್ನು ತಿಳಿಸಿದ ಮೇರೆಗೆ ಸದರಿಯವರು ಖಾಸಗಿ ವಾಹನ ಸಂಖ್ಯೆ: ಕೆಎ–14/ಎಂ.9001ನೇದರಲ್ಲಿ ಗಸ್ತು ತಿರುಗುತ್ತಾ ಹೈಲ್ಯಾಂಡ್, ಸುಂಕಸಾಳ, ಹೊಸಕಂಬಿ ಪ್ರದೇಶದಲ್ಲಿ ಪೆಟ್ರೋಲಿಂಗ್ ಮಾಡುತ್ತಾ ಪುನ: ತಿರುಗಿ ಬಂದು ಸುಂಕಸಾಳ ಶಾಖಾ ಹದ್ದಿಯ ಬ್ಲಾಕ್ 24–25ರ ಕೋಟೆಪಾಲ ರೋಡಿನಲ್ಲಿ ರಣಕಂಬದ ಹತ್ತಿರ ಗಸ್ತುನಲ್ಲಿರುವ 2–3 ಸಿಬ್ಬಂದಿಗಳನ್ನು ಸದರ ಗುನ್ಹೆ ಸ್ಥಳದಲ್ಲಿ ಕಾವಲು ಬಿಟ್ಟಂತೆ ಅವರು ಗಸ್ತು ಕಾಯುತ್ತಿರುವಾಗ ಸುಮಾರು ಬೆಳಗ್ಗಿನ ಜಾವ 5.30 ಘಂಟೆಗೆ ಎನ್.ಹೆಚ್–63ರ ಮಂಗಳೂರು ಹೋಟೆಲ್ ಬದಿಯಲ್ಲಿ ಪೂರ್ಣ ತಾಳಪತ್ರೆ ಕಟ್ಟಿದ ಕೆಎ–30/251 ವಾಹನ ಕಂಡು ಬಂದಿತು. ಸದರ ಟ್ರಕ್ ತಪಾಸಿಸಲಾಗಿ ಸದರ ವಾಹನದಲ್ಲಿ 50 ಭತ್ತದ ಉಮ್ಮಿ ತುಂಬಿದ ಸಿಮೆಂಟ್ ಚೀಲಗಳು ಇದ್ದದ್ದು ಕಂಡು ಬಂದಿತು ಈ ಕುರಿತು ವಾಹನದ ಮಾಲೀಕ/ಚಾಲಕ ಶ್ರೀ. ಗೋವಿಂದ ಬೇಡು ನಾಯ್ಕ ಹಾಗೂ ಕ್ಲೀನರ್ ಮಂಜುನಾಥ ಗಣಪತಿ ನಾಯ್ಕ ಇವರನ್ನು ಕೇಳಲಾಗಿ ಅದನ್ನು ಇಡಗುಂದಿ ಮಿಲ್ಲಿನಿಂದ ತಂದಿರುವದಾಗಿ ಅದಕ್ಕೂ ಮೊದಲು ಅಂಕೋಲಾದಿಂದ ಕೆಂಪು ಚೀರೆಕಲ್ಲನ್ನು ಅಂಕೋಲಾದಿಂದ ಇಡಗುಂದಿಗೆ ಸಾಗಿಸಿರುವದಾಗಿ ತಿಳಿಸಿದರು. ಆದರೆ ಸದರ ವಾಹನವನ್ನು ಪರಿಶೀಲಿಸಿದಾಗ ಅದರಲ್ಲಿ ಕೆಂಪು ಕಲ್ಲು ತುಂಬಿರುವ ಕುರುಹು ಯಾವುದೇ ಇಲ್ಲವೆಂದು ಸಿಬ್ಬಂದಿಗಳು ತಿಳಿಸಿರುತ್ತಾರೆ. ನಂತರ ವಾಹನವನ್ನು ಹೆಚ್ಚಿನ ತನಿಖೆಗಾಗಿ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ವಲಯಕ್ಕೆ ತರಲಾಯಿತು. ಈ ಕುರಿತು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಸುದೀರ್ಘವಾಗಿ ವಾಹನ ಚಾಲಕನನ್ನು ವಿಚಾರಿಸಲಾಗಿ ಆಗ ವಾಹನ ಚಾಲಕ/ಮಾಲೀಕನಾದ ಗೋವಿಂದ ಬೇಡು ನಾಯ್ಕ ಇತನು ತಾನು ಸದರ ವಾಹನದಲ್ಲಿ ಸಾಗವಾನಿ ತುಂಡುಗಳನ್ನು ತುಂಬಲು ಬಂದಿದ್ದು ನಿಜವಿರುವದಾಗಿ ಹಾಗೂ ತಾನು ಇದನು ಸಂಜು ಪಾಂಡುರಂಗ ನಾಯ್ಕ, ಸಾ: ಅಂಕೋಲಾ ಇವರ ಸಲಹೆ ಮೇರೆಗೆ ಹೆಬ್ಬುಳ ಹಾಗೂ ಸುಂಕಸಾಳ ಅರಣ್ಯ ಪ್ರದೇಶದಲ್ಲಿ ತಯಾರಿಸಲ್ಪಟ್ಟ ತುಂಡುಗಳನ್ನು ತರಲು ಹೊರಟಿರುವದಾಗಿ ತಿಳಿಸಿದರು. ಹಾಗೂ ಈ ರೀತಿ ತಾನು ಸಾಗ ತುಂಡುಗಳನ್ನು ತುಂಬಲು ಹೋಗಬೇಕಾದರೆ ತಾನು ಊಟ ಮಾಡಲು ನಿಂತ ದಾಬಾದ ಬಳಿ ಸಂಜು ಪಾಂಡುರಂಗ ನಾಯ್ಕ ಇತನು ಬಂದು ಅರಣ್ಯ ಸಿಬ್ಬಂದಿಗಳಿಗೆ ಸಂಶಯ ಬಂದ ಕಾರಣ ಸಾಗ ತುಂಡುಗಳನ್ನು ತುಂಬುವದು ಬೇಡ ಎಂದು ಕಾರಣ ತಾನು ಅಲ್ಲಿಯೇ ವಾಹನವನ್ನು ನಿಲ್ಲಿಸಿಟ್ಟ ಬಗ್ಗೆ ಹಾಗೂ ಭತ್ತದ ಉಮ್ಮಿಯ ಚೀಲಗಳನ್ನು ತೆಗೆದುಕೊಂಡು ಹೋಗಿ ಸಾಗ ತುಂಡುಗಳನ್ನು ತುಂಬಿ ಬರಲು ಯೋಜನೆ ಮಾಡಿದ ಬಗ್ಗೆ ತಿಳಿಸಿ, ಸದರ ಸಾಗವಾನಿ ತುಂಡುಗಳು ಇದ್ದ ಸ್ಥಳವನ್ನು ಸಹ ತೋರಿಸುವದಾಗಿ ತಿಳಿಸಿದ ಮೇರೆಗೆ ಅವನ ಜೊತೆ ಸಿಬ್ಬಂದಿಗಳು ಸದರ ಸಾಗವಾನಿ ತುಂಡುಗಳನ್ನು ದಾಸ್ತಾನು ಇಟ್ಟ ಸ್ಥಳವಾದ ಸುಂಕಸಾಳ ಬ್ಲಾಕ್–24–25ರಲ್ಲಿ ಹೋಗಿ ಪರಿಶೀಲಿಸಿ ನೋಡಲಾಗಿ ಅಲ್ಲಲ್ಲಿ ರಸ್ತೆ ಬದಿಗೆ ಚಿಪಡದಲ್ಲಿ ತುಂಡುಗಳು ದಾಸ್ತಾನು ಇಟ್ಟಿದ್ದು ಕಂಡು ಬಂದಿತು. ಸದರ ತುಂಡುಗಳು ತಾಜಾ ಹಸಿ ತುಂಡುಗಳು ಇದ್ದು ಯಾವುದೇ ನಂಬರ ವಗೈರೆ ಇರಲಿಲ್ಲ ಇವುಗಳು ಅನಧಿಕೃತ ತುಂಡುಗಳು ಎಂದು ಖಾತ್ರಿ ಮಾಡಿಕೊಂಡು ಸದರ ವೇಳೆಯಲ್ಲಿ ಪಂಚರು ಸಿಗದಿದ್ದ ಕಾರಣ ಇಲಾಖಾ ಸಿಬ್ಬಂದಿಗಳನ್ನೇ ಪಂಚರನ್ನಾಗಿಸಿಕೊಂಡು ಪಂಚನಾಮೆಯನ್ನು ಬೆಳಿಗ್ಗೆ 10 ಗಂಟೆಯಿಂದ ಪ್ರಾರಂಭಿಸಿ ವಿಚಾರಣೆಯೊಂದಿಗೆ ಸಂಜೆ 6.30ಕ್ಕೆ ಬರೆದು ಮುಗಿಸಲಾಯಿತು. ಪಂಚರ ಸಮಕ್ಷಮ ತುಂಡುಗಳನ್ನು ಎಣಿಸಲಾಗಿ ಅವು 45 ತುಂಡುಗಳು 3.222 ಘ.ಮೀ. ಇದ್ದದ್ದು ಕಂಡು ಬಂದು ಅದಕ್ಕೆ ಟೀ ನಿಶಾನೆ ಚಪ್ಪಾ ಹೊಡೆದು ಅದನ್ನು ಇಲಾಖಾ ತಾಬಾ ಪಡಕೊಳ್ಳಲಾಯಿತು. ನಂತರ ಸದರ ವಾಹನವನ್ನು ಪರಿಶೀಲಿಸಿ ನೋಡಲಾಗಿ ಅದರ ಮುಖ ಭಾಗ ಹಳದಿ ಬಣ್ಣದಿದ್ದು ಮುಂದುಗಡೆ ಬೋರ್ಡಿನಲ್ಲಿ ನಾಗೇಶ ಮಹಾಲಕ್ಷ್ಮಿ ಅಂತಾ ದಪ್ಪಕ್ಷರದಲ್ಲಿ ಬರದದ್ದು ಇದ್ದು, ಕ್ಯಾಬಿನ್ ಗಾಡಿಯ ಬಾಡಿ ಆಕಾಶ ಕಲರ್ ಇದ್ದು ವಾಹನದ ಎಡಭಾಗದ ಮೇಲೆ ವಾಹನದ ಮಾಲೀಕ/ಚಾಲಕನ ಟೆಲಿಫೋನ್ ನಂಬರ 631460 ನಮೂದಿಸಿದ್ದು ಇರುತ್ತದೆ. ಮತ್ತು ವಾಹನದ ಮೇಲೆ ಕಪ್ಪು ಬಣ್ಣದಲ್ಲಿ ಕೆಎ–30/251 ಅಂತಾ ನಂಬರ ಬರೆದದ್ದು ಇರುತ್ತದೆ. ಹಾಗೂ ಸದರ ಗುನ್ಹೆಗೆ ಬಳಸಿದ ವಾಹನವನ್ನು ಈ ಹಿಂದೆ ನಾವು ನಾಲ್ಕು ಬಾರಿ ಗುನ್ಹೆಗೆ ಬಳಸಿದ್ದಾಗಿ ತಿಳಿಸಿದ್ದು ಇರುತ್ತದೆ. ಇದರಿಂದ ಸದರ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿಕೊಂಡಿದ್ದನ್ನು ಖಾತ್ರಿಪಡಿಸಿ 71ಎ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಾಹನವನ್ನು ಜಫ್ತಪಡಿಸಲಾಯಿತು. ಹಾಗೂ ಅಕ್ರಮ ಸಾಗಾಣಿಕೆಯ ವ್ಯವಹಾರದಲ್ಲಿ ಭಾಗಿಯಾಗಿದ್ದ ವಾಹನದ ಮಾಲೀಕ/ಚಾಲಕರಾದ ಶ್ರೀ ಗೋವಿಂದ ಬೇಡು ನಾಯ್ಕ ಮತ್ತು ಕ್ಲೀನರ್ ಮಂಜುನಾಥ ಗಣಪತಿ ನಾಯ್ಕ ಇವರನ್ನು ಅರಣ್ಯ ಕಾಯಿದೆಯಂತೆ ಕ್ರಮ ಕೈಕೊಳ್ಳಲು ನ್ಯಾಯಾಲಯಕ್ಕೆ ಒಪ್ಪಿಸಲು ನಿರ್ಧರಿಸಿ ಬಂಧಿಸಲಾಯಿತು. ಆದ್ದರಿಂದ ಈ ಅರಣ್ಯ ಗುನ್ಹೆ ಪ್ರಕರಣದಲ್ಲಿ ತೊಡಗಿಸಿಕೊಂಡ ವಾಹನ ಹಾಗೂ ಸಾಗ ನಗಗಳು 45=3.222 ಘ.ಮೀ. ಪ್ರಥಮ ಮಾಹಿತಿ ವರದಿ ಸಂಖ್ಯೆ: 7/2003–04 ದಿನಾಂಕ: 20–02–2004 ರಂತೆ ಗುನ್ಹೆ ದಾಖಲಿಸಿಕೊಳ್ಳಲಾಯಿತು. ಗುನ್ಹೆಗೆ ಬಳಸಿದ ವಾಹನ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ 144ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಫ್ತ ವಾಹನ ಮತ್ತು ಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಹಾಗೂ ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 11–03–2004 ರಂದು ಸದರ ಜಫ್ತಪಡಿಸಿದ ವಾಹನ ಮತ್ತು ಸಾಗ ನಗಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಫ್ತ ವಾಹನದಲ್ಲಿ ಇರುವ ಆರ್.ಸಿ. ಪುಸ್ತಕ ಆಧಾರದ ಮೇಲೆ ಶ್ರೀ. ಗೋವಿಂದ ಬೇಡು ನಾಯ್ಕ, ಸಾ: ವಂದಿಗೆ, ತಾಲೂಕ: ಅಂಕೋಲಾ ಇವರು ಟಾಟಾ ಟ್ರಕ್ ವಾಹನ ಸಂಖ್ಯೆ: ಕೆಎ–30/251 ನೇದರ ಮಾಲೀಕರಾಗಿರುತ್ತಾರೆ. ಸದರ ವಾಹನದ ಮಾಲೀಕರಾದ ಶ್ರೀ. ಗೋವಿಂದ ಬೇಡು ನಾಯ್ಕ, ಸಾ: ವಂದಿಗೆ ಇವರು ದಿನಾಂಕ: 08–03–2004 ರಂದು ಅವರ ಪರವಾಗಿ ವಕೀಲರ ಮುಖಾಂತರ ವಾಹನವನ್ನು ಬಿಡುಗಡೆ ಮಾಡಲು ಕೋರಿಕೊಂಡಿದ್ದು ಇರುತ್ತದೆ. ಆದರೆ, ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 28–04–2006 ರಂದು ಅರ್ಜಿದಾರರಿಗೆ ಅರಣ್ಯಗುನ್ಹೆಯಲ್ಲಿ ಜಫ್ತಪಡಿಸಿದ ಟಾಟಾ ಟ್ರಕ್ ಸಂಖ್ಯೆ: ಕೆಎ–30/251 ನೇದನ್ನು ಮಧ್ಯಂತರ ತಾಬಾಕ್ಕೆ ಬಿಡಲು ಅರ್ಜಿದಾರರ ಮನವಿಯನ್ನು ತಿರಸ್ಕರಿಸಿದ್ದು ಇರುತ್ತದೆ.

3. ಅರ್ಜಿದಾರರು ಈ ನ್ಯಾಯಾಲಯದ ಆದೇಶದ ವಿರುದ್ಧ ಮಾನ್ಯ ಜಿಲ್ಲಾ ಸೆಷನ್ ಕೋರ್ಟ, ಕಾರವಾರದಲ್ಲಿ ಮೇಲ್ಮನವಿಯನ್ನು ಸಲ್ಲಿಸಿ ವಾಹನವನ್ನು ಬಿಡುಗಡೆಗೊಳಿಸಲು ಕೋರಿಕೊಂಡಿದ್ದು ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯ, ಕಾರವಾರ ಸಿ.ಎ. ನಂ. 82/2006, ದಿನಾಂಕ: 30–08–2006 ರಂತೆ ರೂ. 50,000.00 ಬ್ಯಾಂಕ್ ಗ್ಯಾರಂಟಿಯನ್ನು ಈ ಪ್ರಾಧಿಕಾರಕ್ಕೆ ನೀಡಿ ಮತ್ತು ಇತರೇ ಶರ್ತುಗಳಿಗೊಳಪಟ್ಟು ಜಪ್ತ ವಾಹನವನ್ನು ಮಧ್ಯಂತರ ತಾಬಾ ಬಿಡಲು ಆದೇಶ ನೀಡಿದ್ದು ಇರುತ್ತದೆ.

4. ಗುನ್ನೆಗಾರ/ವಾಹನದ ಮಾಲೀಕರಾದ ಶ್ರೀ. ಗೋವಿಂದ ಬೇಡು ನಾಯ್ಕ, ಸಾ: ವಂದಿಗೆ, ಹನುಮಟ್ಟಾ ಇವರು ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯ, ಕಾರವಾರ ಆದೇಶಾನುಸಾರ ಬ್ಯಾಂಕ್ ಗ್ಯಾರಂಟಿಯನ್ನು ನೀಡಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಿಕೊಂಡಿದ್ದು ಇರುವುದಿಲ್ಲ.

5. ಈ ಪ್ರಕರಣದ ವಿಚಾರಣೆಯನ್ನು ದಿನಾಂಕ: 6–12–2004, 13–12–2004, 20–12–2004, 27–12–2004, 17–1–2005, 7–2–2005, 9–10–2007, 30–10–2007, 27–11–2012, 30–8–2013, 5–9–2013, 8–11–2013, 6–12–2013, 20–12–2013, 3–1–2014, 17–1–2014, 14–2–2014, 28–2–2014, 23–5–2014, 4–7–2014, 1–8–2014, 5–9–2014, 31–10–2014, 21–11–2014, 5–12–2014 ಮತ್ತು 3–1–2015 ರಂದು ಈ ನ್ಯಾಯಾಲಯದಲ್ಲಿ ಇಟ್ಟುಕೊಳ್ಳಲಾಯಿತು.

6. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ವಿಚಾರಣೆ ಕಾಲಕ್ಕೆ ಹಾಜರಾಗಿರುತ್ತಾರೆ. ಹಾಗೂ ಎದುರುದಾರರ ಪರವಾಗಿ ಕಾನೂನು ಅಧಿಕಾರಿಗಳು (ಕಿ), ಉತ್ತರಕನ್ನಡ ಕಾರವಾರ ರವರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲು–1 ರಿಂದ ಪಿಡಬ್ಲು–4 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲು–1 : ಶ್ರೀ. ಕುಸ್ಲಪ್ಪ ಲಕ್ಷ್ಮಣ ನಾಯ್ಕ ಉಪ ವಲಯ ಅರಣ್ಯಾಧಿಕಾರಿ,
(ಹಾಲಿ ಕರ್ತವ್ಯ ಬಾಳೇಗುಳಿ ಶಾಖೆ, ಅಂಕೋಲಾ ವಲಯ)

ಪಿಡಬ್ಲು–2 : ಶ್ರೀ. ವಾಮನ ಸುಬ್ರಾಯ ನಾಯ್ಕ, ಉಪ ವಲಯ ಅರಣ್ಯಾಧಿಕಾರಿ
(ಈಗ ಹಾಲಿ ನಿವೃತ್ತಿ), ವಾಸಸ್ಥಳ: ಮಂಜಗುಣಿ, ಅಂಕೋಲಾ.

ಪಿಡಬ್ಲು–3 : ಶ್ರೀ. ಸುರೇಶ ನಾರಾಯಣ ಪಡ್ತಿ, ಅರಣ್ಯ ವೀಕ್ಷಕ, ಸುಂಕಸಾಳ

ಪಿಡಬ್ಲು–4 : ಶ್ರೀ. ಕೆ.ಜಿ. ಪ್ರಕಾಶ, ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ
(ಹಾಲಿ ಕರ್ತವ್ಯ ವನ್ಯಜೀವಿ ವಲಯ, ಫಣಸೋಲಿ)

ನಿಶಾನೆ ಪಿ–1 ರಿಂದ ಪಿ–5 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1: ಪಂಚನಾಮೆ

ನಿಶಾನೆ ಪಿ–2&: ವಾಹನದ ಛಾಯಾ ಚಿತ್ರ

ನಿಶಾನೆ ಪಿ–4: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–5: ಸೀಜರ ರಿಪೋರ್ಟ

7. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ನಗಗಳು 45=3.222 ಘ.ಮೀ. ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ ?

ಆ) ಈ ಮೇಲೆ ನಮೂದಿಸಿದ ಸಾಗ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಟಾಟಾ ಟ್ರಕ್ ವಾಹನ ಸಂಖ್ಯೆ: KA–30/251 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ ?

ಇ) ಈ ಗುನ್ನೆಯನ್ನು ವಾಹನದ ಮಾಲೀಕ/ಅಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲು–1** ಶ್ರೀ. ಕುಸ್ಲಪ್ಪ ಲಕ್ಷ್ಮಣ ನಾಯ್ಕ ಇವರು ತಮ್ಮ ಸಾಕ್ಷ್ಯದಲ್ಲಿ ಜನೇವರಿ–2004 ರಿಂದ 2006 ರ ವರೆಗೆ ನಾನು ಸುಂಕಸಾಳದಲ್ಲಿ ಶಾಖಾ ವನಪಾಲಕನಾಗಿ ಕೆಲಸ ಮಾಡಿದ್ದೇನೆ. ಆ ಸಮಯದಲ್ಲಿ ಅಲ್ಲಿ ಕಾಮಗಾರಿ ವನಪಾಲಕರಾಗಿ ವಿ.ಎಸ್. ನಾಯ್ಕ ಹಾಗೂ ಸುರೇಶ ಪಡ್ತಿ ಯವರು ಅರಣ್ಯ ರಕ್ಷಕರಾಗಿ ಕೆಲಸ ಮಾಡುತ್ತಿದ್ದರು. ದಿನಾಂಕ: 19–02–2004 ರಂದು ರಾತ್ರಿ ನಾಗೇಶ ಮಹಾಲಕ್ಷ್ಮಿ ಹೆಸರಿನ ವಾಹನದಲ್ಲಿ ಸುಂಕಸಾಳ ಶಾಖಾ ಅಧೀನದಲ್ಲಿ ಸಾಗವಾನಿ ತುಂಡುಗಳನ್ನು ಸಾಗಿಸುತ್ತಿರುವ ಬಗ್ಗೆ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರಿಗೆ ಮಾಹಿತಿ ಬಂದಿತು. ಈ ವಿಷಯವನ್ನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ರಾತ್ರಿ ಗಸ್ತು ಕರ್ತವ್ಯದಲ್ಲಿದ್ದ ನನಗೆ ಮತ್ತು ಶಾಖಾ ವನಪಾಲಕ ಮಾಸ್ತಿಕಟ್ಟಾ ಶ್ರೀ.ಹೆಚ್.ವಿ.. ನಾಯ್ಕ ಮತ್ತು ಬೀಟ ಗಾರ್ಡ ಶ್ರೀ. ಬಿ.ಜಿ. ರಾಣೆ, ಅಗಸೂರು ಹಾಗೂ ಕಾಮಗಾರಿ ವನಪಾಲಕರಾದ ವಿ.ಎಸ್. ನಾಯ್ಕ, ಅರಣ್ಯ ವೀಕ್ಷಕ ಸುರೇಶ ಪಡ್ತಿ ಮತ್ತು ಅರಣ್ಯ ರಕ್ಷಕರಾದ ಸಿ.ಡಿ. ಗುನಗಿ ಯವರಿಗೆ ತಿಳಿಸಿದರು. ನಂತರ ಈ ಮೇಲೆ ಹೇಳಿದ ನಾವೆಲ್ಲರೂ ಖಾಸಗಿ ವಾಹನ ಸಂಖ್ಯೆ: ಕೆಎ–14/ಎಂ.9001 ರಲ್ಲಿ ಮಾಹಿತಿ ಬಂದ ಸ್ಥಳಕ್ಕೆ ಗಸ್ತಿಗೆ ಹೋದೆವು. ಈ ರೀತಿ ನಾವು ಸುಂಕಸಾಳ ಹೈಲ್ಯಾಂಡ್ ಹೋಟೆಲ್ ವರೆಗೆ ಹೋದೆವು. ಪುನ: ತಿರುಗಿ ಬಂದು ಸುಂಕಸಾಳ ರಣಕಂಬದ ಹತ್ತಿರ ನಮ್ಮಲ್ಲಿದ್ದ ಮೂರು ಸಿಬ್ಬಂದಿಗಳನ್ನು ಅಲ್ಲಿ ಇಳಿಸಿದೆವು. ನಾನು ಹಾಗೂ ಇತರೇ ಸಿಬ್ಬಂದಿಗಳು ಖಾಸಗಿ ವಾಹನ ಸಮೇತ ಮಾಸ್ತಿಕಟ್ಟಾ ಸಮೀಪ ಹೊಸಕಂಬಿ ಓಣಿಗೆ ಬಂದೆವು. ಬಂದು ವಾಹನ ಶೋಧ ಕಾರ್ಯದಲ್ಲಿ ತೊಡಗಿದೆವು. ಮಾಹಿತಿ ಬಂದ ವಾಹನ ಬರದೇ ಇದ್ದ ಕಾರಣ ಬೆಳಗಿನ ಜಾವ ನಾವು ಅಗಸೂರಿಗೆ ಹೋದೆವು. ಅಗಸೂರಿನಲ್ಲಿ ಎನ್.ಹೆಚ್.–63 ರ ಬದಿಗೆ ಮಂಗಳೂರು ಹೋಟೆಲ ಇದ್ದು ಅದರ ಬದಿಯಲ್ಲಿ ನಮಗೆ ಮಾಹಿತಿ ಬಂದ ವಾಹನ ಸಂಖ್ಯೆ: ಕೆಎ–30/251 ನಾಗೇಶ ಮಹಾಲಕ್ಷ್ಮಿ ಎಂಬ ಹೆಸರಿದ್ದ ಒಂದು ಟ್ರಕ್ಕು ನಿಂತಿತ್ತು. ಸದರಿ ಟ್ರಕ್ಕಿಗೆ ತಾಡಪತ್ರಿಯಿಂದ ಪೂರ್ತಿಯಾಗಿ ಮುಚ್ಚಲಾಗಿತ್ತು. ನಾನು ಹಾಗೂ ಇತರೇ ಸಿಬ್ಬಂದಿಗಳು ಸೇರಿ ಸದರಿ ಟ್ರಕ್ಕನ್ನು ಪರೀಕ್ಷೆ ಮಾಡಿದೆವು. ಅದರಲ್ಲಿ ಸುಮಾರು 50 ಚೀಲ ಭತ್ತದ ಉಮ್ಮಿ ತುಂಬಿದ ಚೀಲಗಳು ಕಂಡು ಬಂದವು. ವಾಹನದಲ್ಲಿ ವಾಹನದ ಚಾಲಕನಾದ ಶ್ರೀ. ಗೋವಿಂದ ಬೇಡು ನಾಯ್ಕ ಇತರರು ಇದ್ದು ಇತನನ್ನು ಈ ಉಮ್ಮಿ ಚೀಲಗಳ ಬಗ್ಗೆ ವಿಚಾರಿಸಲಾಗಿ ಅದನ್ನು ಇಡಗುಂದಿ ಮಿಲ್ಲಿನಿಂದ ತಂದಿರುವದಾಗಿ ತಿಳಿಸಿದರು. ಅದಕ್ಕೂ ಮೊದಲು ಅಂಕೋಲಾದಿಂದ ಅದೇ ವಾಹನದಲ್ಲಿ ಕೆಂಪು ಚೀರೆ ಕಲ್ಲನ್ನು ಇಡಗುಂದಿಗೆ ಸಾಗಿಸಿರುವದಾಗಿ ತಿಳಿಸಿರುತ್ತಾನೆ. ಆದರೆ ವಾಹನ ಪರಿಶೀಲಿಸಲಾಗಿ, ಅದರಲ್ಲಿ ಕೆಂಪು ಕಲ್ಲು ತುಂಬಿದ ಬಗ್ಗೆ ಯಾವುದೇ ಕುರುಹುಗಳು ಕಂಡು ಬಾರದೇ ಇದ್ದದರಿಂದ ಹೆಚ್ಚಿನ ತನಿಖೆಗಾಗಿ ಸದರಿ ವಾಹನವನ್ನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾರವರ ಕಚೇರಿಗೆ ತರಲಾಯಿತು. ನಾವು ವಾಹನ ಪರೀಕ್ಷೆ ಮಾಡುವ ಕಾಲಕ್ಕೆ ವಾಹನದಲ್ಲಿ ಓರ್ವ ಮಂಜುನಾಥ ಗಣಪತಿ ನಾಯ್ಕ ಸಹ ಇದ್ದರು. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ರವರಾದ ಶ್ರೀ. ಪ್ರಕಾಶ ರವರು ಗೋವಿಂದ ಬೇಡು ನಾಯ್ಕ ಇತನ ಹತ್ತಿರ ಈ ಬಗ್ಗೆ ದೀರ್ಘ ವಿಚಾರಣೆ ನಡೆಸಿದ್ದು ಆಗ ಗೋವಿಂದ ಬೇಡು ನಾಯ್ಕ ಇತನು ತಾನು ಸದರಿ ವಾಹನದಲ್ಲಿ ಸಾಗವಾನಿ ತುಂಡುಗಳನ್ನು ತುಂಬಲು ಬಂದಿದ್ದು ನಿಜವೆಂದು ತಿಳಿಸಿರುತ್ತಾನೆ. ಹಾಗೂ ತಾನು ಸಂಜು ಪಾಂಡುರಂಗ ನಾಯ್ಕ, ಅಂಕೋಲಾ ಇವರ ಸಲಹೆ ಮೇರೆಗೆ ಹೆಬ್ಬುಳ ಹಾಗೂ ಸುಂಕಸಾಳ ಅರಣ್ಯ ಪ್ರದೇಶದಲ್ಲಿ ತಯಾರಿಸಿಟ್ಟ ತುಂಡುಗಳನ್ನು ತರಲು ಹೊರಟ್ಟಿದ್ದಾಗಿ ತಿಳಿಸಿದನು. ಮತ್ತು ಈ ರೀತಿ ತಾನು ಸಾಗವಾನಿ ತುಂಡುಗಳನ್ನು ತುಂಬಲು ಹೋಗಬೇಕಾದರೆ ತಾನು ಊಟ ಮಾಡಲು ನಿಂತ ದಾಬಾ ದ ಬಳಿ ಸಂಜು ಪಾಂಡುರಂಗ ನಾಯ್ಕ ಇತನು ಬಂದು ಅರಣ್ಯ ಸಿಬ್ಬಂದಿಗಳಿಗೆ ಸಂಶಯ ಬಂದ ಕಾರಣ ಸಾಗ ತುಂಡುಗಳನ್ನು ತುಂಬುವದು ಬೇಡ ಎಂದ ಕಾರಣ ತಾನು ಅಲ್ಲಿಯೇ ವಾಹನವನ್ನು ನಿಲ್ಲಿಸಿಟ್ಟ ಬಗ್ಗೆ ಹೇಳಿದನು. ಮತ್ತು ಭತ್ತದ ಉಮ್ಮಿಯ ಚೀಲಗಳನ್ನು ತೆಗೆದುಕೊಂಡು ಹೋಗಿ ಸಾಗವಾನಿ ತುಂಡುಗಳನ್ನು ತುಂಬಿ ಬರಲು ಯೋಜನೆ ಮಾಡಿದ ಬಗ್ಗೆ ತಿಳಿಸಿದನು. ಹಾಗೂ ಸದರಿ ಸಾಗವಾನಿ ತುಂಡುಗಳನ್ನು ಇಟ್ಟ ಸ್ಥಳವನ್ನು ತಾನು ತೋರಿಸುತ್ತೇನೆ ಎಂದು ಹೇಳಿದ ಮೇರೆಗೆ ಗೋವಿಂದ ಹಾಗೂ ಮಂಜು ಮತ್ತು ನಾವು ಸಿಬ್ಬಂದಿಗಳು ಸುಂಕಸಾಳಕ್ಕೆ ಹೋದೆವು. ಗೋವಿಂದ ಬೇಡು ನಾಯ್ಕ ಇತನು ನಮ್ಮನ್ನು ಸುಂಕಸಾಳ ಬ್ಲಾಕ್ 24 ಮತ್ತು 25ರಲ್ಲಿ ಕರೆದುಕೊಂಡು ಹೋಗಿ ದಾಸ್ತಾನು ಇಟ್ಟ ಸಾಗ ತುಂಡುಗಳನ್ನು ತೋರಿಸಿದ್ದು ಅದನ್ನು ನಾವು ಪರಿಶೀಲನೆ ಮಾಡಿದ್ದೆವು. ಪರಿಶೀಲಿಸಿ ನೋಡಲಾಗಿ ಅಲ್ಲಿ ಒಟ್ಟೂ 45 ಸಾಗವಾನಿ ತುಂಡುಗಳು ಇದ್ದು ಅದಕ್ಕೆ ಯಾವುದೇ ಇಲಾಖಾ ಛಪ್ಪಾ ವಗೈರೆ ಇರಲಿಲ್ಲ. ಅದನ್ನು ಅಳತೆ ಮಾಡಲಾಗಿ ಒಟ್ಟೂ 3.222 ಘ.ಮೀ. ಇದ್ದು ಪ್ರತಿಯೊಂದು ತುಂಡುಗಳಿಗೆ ನಂಬರನ್ನು ಹಾಗಿ ಗುನ್ನಾ ಛಪ್ಪಾವನ್ನು ಹಾಕಲಾಯಿತು. ಸದರ ಸಾಗವಾನಿ ತುಂಡು ಇದ್ದ ಸ್ಥಳದಲ್ಲಿ ಪಂಚನಾಮೆಯನ್ನು ಮಾಡಿ ಸಾಗ ತುಂಡುಗಳನ್ನು ಜಪ್ತಪಡಿಸಿಕೊಂಡೆವು. ನಂತರ ಆರೋಪಿತರು ಹಾಗೂ ಜಪ್ತಪಡಿಸಿದ ಸಾಗವಾನಿ ತುಂಡುಗಳನ್ನು ಖಾಸಗಿ ವಾಹನದಲ್ಲಿ ತುಂಬಿಕೊಂಡು ಮರಳಿ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರ ಕಚೇರಿಗೆ ಬಂದು ನಮ್ಮ ಪಂಚನಾಮೆಯನ್ನು ಮುಂದುವರಿಸಿ ಕಚೇರಿ ಎದುರಗಡೆಯಿದ್ದ ವಾಹನ ಸಂಖ್ಯೆ: ಕೆಎ–30/251 ಟ್ರಕ್ಕನ್ನು ಜಪ್ತಪಡಿಸಿಕೊಂಡೆವು. ಆರೋಪಿತರು ಸದರಿ ವಾಹನದ ಮುಖಾಂತರ ಜಪ್ತಪಡಿಸಿಕೊಂಡ ಸಾಗವಾನಿ ತುಂಡುಗಳನ್ನು ಅನಧಿಕೃತವಾಗಿ ಸಾಗಾಟ ಮಾಡುವ ಉದ್ದೇಶ ಹೊಂದಿದ್ದರಿಂದ ನಾವು ಸದರಿ ವಾಹನವನ್ನು ಪಂಚನಾಮೆಯೊಂದಿಗೆ ಜಪ್ತಪಡಿಸಿಕೊಂಡಿದ್ದೆವು. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ಬಗ್ಗೆ ಗೋವಿಂದ ಬೇಡು ನಾಯ್ಕ ಇತನ ಹೇಳಿಕೆಯನ್ನು ಸಹ ಪಡೆದುಕೊಂಡಿರುತ್ತಾರೆ. ಪಂಚನಾಮೆ ಹಾಗೂ ಸಹಿಯನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ ಅದನ್ನು ನಿ.ಪಿ.–1 ಎಂದು ಸಾಕ್ಷಿ ಸಹಿಯನ್ನು ನಿ.ಪಿ–1ಎ ಎಂದು ಗುರುತಿಸಲಾಯಿತು. ನಾವು ಜಪ್ತಪಡಿಸಿಕೊಂಡ ಟ್ರಕ್ ನಂ ಕೆಎ–30/251ನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿಯು ಸದರಿ ಟ್ರಕ್ಕಿನ ಛಾಯಾ ಚಿತ್ರ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–2 ಮತ್ತು 3 ಎಂದು ಗುರುತಿಸಲಾಯಿತು. ಸದರಿ ಟ್ರಕ್ಕನ್ನು ಈಗ ಮಾನ್ಯ ನ್ಯಾಯಾಲಯದ ಆವರಣದಲ್ಲಿ ನೋಡುತ್ತಿದ್ದು ಅದನ್ನು ಮು.ಮಾ.–1 ಎಂದು ಗುರುತಿಸಲಾಯಿತು. ನಂತರ ಈ ಬಗ್ಗೆ ನಾನು ಆರೋಪಿತರ ವಿರುದ್ಧ ಪ್ರಕರಣ ದಾಖಲಿಸಿದ್ದು ಪ್ರ.ವಾ ವರದಿಯನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿ ನೋಡಿದ ಪ್ರ.ವಾ ವರದಿಯನ್ನು ನಿ.ಪಿ–4 ಎಂದು ಗುರುತಿಸಲಾಯಿತು. ಸಾಕ್ಷಿ ಸಹಿಯನ್ನು ನಿ.ಪಿ–4ಎ ಎಂದು ಗುರುತಿಸಲಾಯಿತು. ಸಾರ್ವಜನಿಕರು ನಿ.ಪಿ–1 ಪಂಚನಾಮೆ ಕಾಲಕ್ಕೆ ಯಾರೂ ಬರದೇ ಇದ್ದ ಕಾರಣ ಇಲಾಖಾ ಸಿಬ್ಬಂದಿಯನ್ನೇ ಪಂಚರನ್ನಾಗಿ ತೆಗೆದುಕೊಳ್ಳಲಾಯಿತು. ನಂತರ ಮುಂದಿನ ಕ್ರಮಕ್ಕಾಗಿ ಆರೋಪಿತರನ್ನು ವಲಯ ಅರಣ್ಯಾಧಿಕಾರಿಗಳು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ದಿನಾಂಕ: 21–2–2004 ರಂದು ಸುಂಕಸಾಳ ವಾಚಮನ್‌ರ ಸಹಾಯದಿಂದ ಜಪ್ತಪಡಿಸಿದ ಸಾಗ ತುಂಡುಗಳ ಬುಡಚಿಯನ್ನು ಹುಡುಕಿದೆವು. ಸುಂಕಸಾಳ ಬ್ಲಾಕ್ 24–25 ರಲ್ಲಿ 14 ಬುಡಚಿಗಳು ಸಿಕ್ಕಿದ್ದು ಈ ಬಗ್ಗೆ ಪಂಚನಾಮೆ ಮಾಡಿರುತ್ತೇನೆ. ನಂತರ ಈ ಬಗ್ಗೆ ಜಪ್ತ ವರದಿಯನ್ನು ಮಾನ್ಯ ವಲಯ ಅರಣ್ಯಾಧಿಕಾರಿಗಳು ತಯಾರಿಸಿದ್ದಾರೆ ಹಾಗೂ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದಾರೆ. ಸದರಿ ಜಪ್ತು ವರದಿಯನ್ನು ನಿ.ಪಿ–5ಎಂದು ಗುರುತಿಸಲಾಯಿತು. ನಂತರ ತನಿಖೆ ಕೈಕೊಂಡು ತನಿಖಾ ವರದಿಯನ್ನು

ವಲಯ ಅರಣ್ಯಾಧಿಕಾರಿಯವರಿಗೆ ಸಲ್ಲಿಸಿರುತ್ತೇನೆ. ವಲಯ ಅರಣ್ಯಾಧಿಕಾರಿಗಳು ಈ ಬಗ್ಗೆ ದೋಷಾರೋಪಣಾ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅರ್ಜಿದಾರನು ಈ ಪ್ರಕರಣದ ಆರೋಪಿತನಾಗಿದ್ದು ವಾಹನ ನಂ. ಕೆಎ–30/251 ಟ್ರಕ್ಕನ್ನು ಅನಧಿಕೃತವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಾಟ ಮಾಡುವ ಉದ್ದೇಶ ಹೊಂದಿ ಅದಕ್ಕೆ ಪ್ರಯತ್ನಿಸಿದ್ದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಬೇಕೆಂದು ನನ್ನ ಪ್ರಾರ್ಥನೆ ಇದೆ. ಅರ್ಜಿದಾರನಾದ ಆರೋಪಿ ವಾಹನ ಚಾಲಕ ಗೋವಿಂದ ಬೇಡು ನಾಯ್ಕ ಇತನನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. (ಅರ್ಜಿದಾರರು ಗೈರು ಇರುತ್ತಾರೆ) ಎಂದು ಹೇಳಿಕೆ ನೀಡಿರುತ್ತಾರೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಪಿಡಬ್ಲು–2** ಶ್ರೀ. ವಾಮನ ಸುಬ್ರಾಯ ನಾಯ್ಕ, ಸಾ: ಮಂಜಗುಣಿ ಇವರು ತಮ್ಮ ಸಾಕ್ಷ್ಯದಲ್ಲಿ ನಾನು 1995 ರಿಂದ 2005 ರ ವರಗೆ ನಾನು ಕಾಮಗಾರಿ ವನಪಾಲಕ ಮಾಸ್ತಿಕಟ್ಟಾ ಎಂತಾ ಕೆಲಸ ಮಾಡಿರುತ್ತೇನೆ. ಪ್ರಸ–1 ಇವರು 2002 ರಿಂದ 2004 ರ ಕಾಲಕ್ಕೆ ಶಾಖಾ ವನಪಾಲಕ, ಸುಂಕಸಾಳ ಎಂತಾ ಕೆಲಸ ಮಾಡುತ್ತಿದ್ದರು. ದಿನಾಂಕ: 19–02–2004 ರಂದು ರಾತ್ರಿ ನಾಗೇಶ ಮಹಾಲಕ್ಷ್ಮಿ ಹೆಸರಿನ ವಾಹನದಲ್ಲಿ ಸುಂಕಸಾಳ ಶಾಖಾ ಅಧೀನದಲ್ಲಿ ಸಾಗವಾನಿ ತುಂಡುಗಳನ್ನು ಸಾಗಿಸುತ್ತಿರುವ ಬಗ್ಗೆ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರಿಗೆ ಮಾಹಿತಿ ಬಂದಿತು. ಈ ವಿಷಯವನ್ನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ರಾತ್ರಿ ಗಸ್ತು ಕರ್ತವ್ಯದಲ್ಲಿದ್ದ ನನಗೆ ಮತ್ತು ಶಾಖಾ ವನಪಾಲಕ ಮಾಸ್ತಿಕಟ್ಟಾ ಶ್ರೀ.ಹೆಚ್.ವಿ.. ನಾಯ್ಕ ಮತ್ತು ಬೀಟ ಗಾರ್ಡ ಶ್ರೀ. ಬಿ.ಜಿ. ರಾಣೆ, ಅಗಸೂರು ಹಾಗೂ ಸುಂಕಸಾಳ ಶಾಖಾ ವನಪಾಲಕರಾದ ಕೆ.ಎಲ್. ನಾಯ್ಕ, ಅರಣ್ಯ ರಕ್ಷಕರಾದ ಸುರೇಶ ಪಡ್ತಿ ಮತ್ತು ಅರಣ್ಯ ವೀಕ್ಷಕರಾದ ಸಿ.ಡಿ. ಗುನಗಿ ಯವರಿಗೆ ತಿಳಿಸಿದರು. ನಂತರ ಈ ಮೇಲೆ ಹೇಳಿದ ನಾವೆಲ್ಲರೂ ಖಾಸಗಿ ವಾಹನ ಸಂಖ್ಯೆ: ಕೆಎ–14/ಎಂ.9001 ರಲ್ಲಿ ಮಾಹಿತಿ ಬಂದ ಸ್ಥಳಕ್ಕೆ ಗಸ್ತಿಗೆ ಹೋದೆವು. ಈ ರೀತಿ ನಾವು ಸುಂಕಸಾಳ ಹೈಲ್ಯಾಂಡ್ ಹೋಟೆಲ್ ವರೆಗೆ ಹೋದೆವು. ಪುನ: ತಿರುಗಿ ಬಂದು ಸುಂಕಸಾಳ ರಣಕಂಬದ ಹತ್ತಿರ ನಮ್ಮಲ್ಲಿದ್ದ ಮೂರು ಸಿಬ್ಬಂದಿಗಳನ್ನು ಅಲ್ಲಿ ಇಳಿಸಿದೆವು. ನಾನು ಹಾಗೂ ಇತರೇ ಸಿಬ್ಬಂದಿಗಳು ಖಾಸಗಿ ವಾಹನ ಸಮೇತ ಮಾಸ್ತಿಕಟ್ಟಾ ಸಮೀಪ ಹೊಸಕಂಬಿ ಓಣಿಗೆ ಬಂದೆವು. ಬಂದು ವಾಹನ ಶೋಧ ಕಾರ್ಯದಲ್ಲಿ ತೊಡಗಿದೆವು. ಮಾಹಿತಿ ಬಂದ ವಾಹನ ಬರದೇ ಇದ್ದ ಕಾರಣ ಬೆಳಗಿನ ಜಾವ ನಾವು ಅಗಸೂರಿಗೆ ಹೋದೆವು. ಅಗಸೂರಿನಲ್ಲಿ ಎನ್.ಹೆಚ್.–63 ರ ಬದಿಗೆ ಮಂಗಳೂರು ಹೋಟೆಲ ಇದ್ದು ಅದರ ಬದಿಯಲ್ಲಿ ನಮಗೆ ಮಾಹಿತಿ ಬಂದ ವಾಹನ ಸಂಖ್ಯೆ: ಕೆಎ–30/251 ನಾಗೇಶ ಮಹಾಲಕ್ಷ್ಮಿ ಎಂಬ ಹೆಸರಿದ್ದ ಒಂದು ಟ್ರಕ್ಕು ನಿಂತಿತ್ತು. ಸದರಿ ಟ್ರಕ್ಕಿಗೆ ತಾಡಪತ್ರಿಯಿಂದ ಪೂರ್ತಿಯಾಗಿ ಮುಚ್ಚಲಾಗಿತ್ತು. ನಾನು ಹಾಗೂ ಇತರೇ ಸಿಬ್ಬಂದಿಗಳು ಸೇರಿ ಸದರಿ ಟ್ರಕ್ಕನ್ನು ಪರೀಕ್ಷೆ ಮಾಡಿದೆವು. ಅದರಲ್ಲಿ ಸುಮಾರು 50 ಚೀಲ ಭತ್ತದ ಉಮ್ಮಿ ತುಂಬಿದ ಚೀಲಗಳು ಕಂಡು ಬಂದವು. ವಾಹನದಲ್ಲಿ ವಾಹನದ ಚಾಲಕನಾದ ಶ್ರೀ. ಗೋವಿಂದ ಬೇಡು ನಾಯ್ಕ ಇತರರು ಇದ್ದು ಇತನನ್ನು ಈ ಉಮ್ಮಿ ಚೀಲಗಳ ಬಗ್ಗೆ ವಿಚಾರಿಸಲಾಗಿ ಅದನ್ನು ಇಡಗುಂದಿ ಮಿಲ್ಲಿನಿಂದ ತಂದಿರುವದಾಗಿ ತಿಳಿಸಿದರು. ಅದಕ್ಕೂ ಮೊದಲು ಅಂಕೋಲಾದಿಂದ ಅದೇ ವಾಹನದಲ್ಲಿ ಕೆಂಪು ಚೀರೆ ಕಲ್ಲನ್ನು ಇಡಗುಂದಿಗೆ ಸಾಗಿಸಿರುವದಾಗಿ ತಿಳಿಸಿರುತ್ತಾನೆ. ಆದರೆ ವಾಹನ ಪರಿಶೀಲಿಸಲಾಗಿ, ಅದರಲ್ಲಿ ಕೆಂಪು ಕಲ್ಲು ತುಂಬಿದ ಬಗ್ಗೆ ಯಾವುದೇ ಕುರುಹುಗಳು ಕಂಡು ಬಾರದೇ ಇದ್ದದರಿಂದ ಹೆಚ್ಚಿನ ತನಿಖೆಗಾಗಿ ಸದರಿ ವಾಹನವನ್ನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾರವರ ಕಚೇರಿಗೆ ತರಲಾಯಿತು. ನಾವು ವಾಹನ ಪರೀಕ್ಷೆ ಮಾಡುವ ಕಾಲಕ್ಕೆ ವಾಹನದಲ್ಲಿ ಓರ್ವ ಮಂಜುನಾಥ ಗಣಪತಿ ನಾಯ್ಕ ಸಹ ಇದ್ದರು. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ರವರಾದ ಶ್ರೀ. ಪ್ರಕಾಶ ರವರು ಗೋವಿಂದ ಬೇಡು ನಾಯ್ಕ ಇತನ ಹತ್ತಿರ ಈ ಬಗ್ಗೆ ದೀರ್ಘ ವಿಚಾರಣೆ ನಡೆಸಿದ್ದು ಆಗ ಗೋವಿಂದ ಬೇಡು ನಾಯ್ಕ ಇತನು ತಾನು ಸದರಿ ವಾಹನದಲ್ಲಿ ಸಾಗವಾನಿ ತುಂಡುಗಳನ್ನು ತುಂಬಲು ಬಂದಿದ್ದು ನಿಜವೆಂದು ತಿಳಿಸಿರುತ್ತಾನೆ. ಹಾಗೂ ತಾನು ಸಂಜು ಪಾಂಡುರಂಗ ನಾಯ್ಕ, ಅಂಕೋಲಾ ಇವರ ಸಲಹೆ ಮೇರೆಗೆ ಹೆಬ್ಬುಳ ಹಾಗೂ ಸುಂಕಸಾಳ ಅರಣ್ಯ ಪ್ರದೇಶದಲ್ಲಿ ತಯಾರಿಸಿಟ್ಟ ತುಂಡುಗಳನ್ನು ತರಲು ಹೊರಟ್ಟಿದ್ದಾಗಿ ತಿಳಿಸಿದನು. ಮತ್ತು ಈ ರೀತಿ ತಾನು ಸಾಗವಾನಿ ತುಂಡುಗಳನ್ನು ತುಂಬಲು ಹೋಗಬೇಕಾದರೆ ತಾನು ಊಟ ಮಾಡಲು ನಿಂತ ದಾಬಾದ ಬಳಿ ಸಂಜು ಪಾಂಡುರಂಗ ನಾಯ್ಕ ಇತನು ಬಂದು ಅರಣ್ಯ ಸಿಬ್ಬಂದಿಗಳಿಗೆ ಸಂಶಯ ಬಂದ ಕಾರಣ ಸಾಗ ತುಂಡುಗಳನ್ನು ತುಂಬುವದು ಬೇಡ ಎಂದ ಕಾರಣ ತಾನು ಅಲ್ಲಿಯೇ ವಾಹನವನ್ನು ನಿಲ್ಲಿಸಿಟ್ಟ ಬಗ್ಗೆ ಹೇಳಿದನು. ಮತ್ತು ಭತ್ತದ ಉಮ್ಮಿಯ ಚೀಲಗಳನ್ನು ತೆಗೆದುಕೊಂಡು ಹೋಗಿ ಸಾಗವಾನಿ ತುಂಡುಗಳನ್ನು ತುಂಬಿ ಬರಲು ಯೋಜನೆ ಮಾಡಿದ ಬಗ್ಗೆ ತಿಳಿಸಿದನು. ಹಾಗೂ ಸದರಿ ಸಾಗವಾನಿ ತುಂಡುಗಳನ್ನು ಇಟ್ಟ ಸ್ಥಳವನ್ನು ತಾನು ತೋರಿಸುತ್ತೇನೆ ಎಂದು ಹೇಳಿದ ಮೇರೆಗೆ ಗೋವಿಂದ ಹಾಗೂ ಮಂಜು ಮತ್ತು ನಾವು ಸಿಬ್ಬಂದಿಗಳು ಸುಂಕಸಾಳಕ್ಕೆ ಹೋದೆವು. ಗೋವಿಂದ ಬೇಡು ನಾಯ್ಕ ಇತನು ನಮ್ಮನ್ನು ಸುಂಕಸಾಳ ಬ್ಲಾಕ್ 24 ಮತ್ತು 25ರಲ್ಲಿ ಕರೆದುಕೊಂಡು ಹೋಗಿ ದಾಸ್ತಾನು ಇಟ್ಟ ಸಾಗ ತುಂಡುಗಳನ್ನು ತೋರಿಸಿದ್ದು ಅದನ್ನು ನಾವು ಪರಿಶೀಲನೆ ಮಾಡಿದ್ದೆವು. ಪರಿಶೀಲಿಸಿ ನೋಡಲಾಗಿ ಅಲ್ಲಿ ಒಟ್ಟೂ 45 ಸಾಗವಾನಿ ತುಂಡುಗಳು ಇದ್ದು ಅದಕ್ಕೆ ಯಾವುದೇ ಇಲಾಖಾ ಛಪ್ಪಾ ವಗೈರೆ ಇರಲಿಲ್ಲ. ಅದನ್ನು ಅಳತೆ ಮಾಡಲಾಗಿ ಒಟ್ಟೂ 3.222 ಘ.ಮೀ. ಇದ್ದು ಪ್ರತಿಯೊಂದು ತುಂಡುಗಳಿಗೆ ನಂಬರನ್ನು ಹಾಗಿ ಗುನ್ನಾ ಛಪ್ಪಾವನ್ನು ಹಾಕಲಾಯಿತು. ಸದರ ಸಾಗವಾನಿ ತುಂಡು ಇದ್ದ ಸ್ಥಳದಲ್ಲಿ ಪಂಚನಾಮೆಯನ್ನು ಮಾಡಿ ಸಾಗ ತುಂಡುಗಳನ್ನು ಜಪ್ತಪಡಿಸಿಕೊಂಡೆವು. ನಂತರ ಆರೋಪಿತರು ಹಾಗೂ ಜಪ್ತಪಡಿಸಿದ ಸಾಗವಾನಿ ತುಂಡುಗಳನ್ನು ಖಾಸಗಿ ವಾಹನದಲ್ಲಿ ತುಂಬಿಕೊಂಡು ಮರಳಿ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರ ಕಚೇರಿಗೆ ಬಂದು ನಮ್ಮ ಪಂಚನಾಮೆಯನ್ನು ಮುಂದುವರಿಸಿ ಕಚೇರಿ ಎದುರಗಡೆಯಿದ್ದ ವಾಹನ ಸಂಖ್ಯೆ: ಕೆಎ–30/251 ಟ್ರಕ್ಕನ್ನು ಜಪ್ತಪಡಿಸಿಕೊಂಡೆವು. ಆರೋಪಿತರು ಸದರಿ ವಾಹನದ ಮುಖಾಂತರ ಜಪ್ತಪಡಿಸಿಕೊಂಡ ಸಾಗವಾನಿ ತುಂಡುಗಳನ್ನು ಅನಧಿಕೃತವಾಗಿ ಸಾಗಾಟ ಮಾಡುವ ಉದ್ದೇಶ ಹೊಂದಿದ್ದರಿಂದ ನಾವು ಸದರಿ ವಾಹನವನ್ನು ಪಂಚನಾಮೆಯೊಂದಿಗೆ ಜಪ್ತಪಡಿಸಿಕೊಂಡಿದ್ದೆವು. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ಬಗ್ಗೆ ಗೋವಿಂದ ಬೇಡು ನಾಯ್ಕ ಇತನ ಹೇಳಿಕೆಯನ್ನು ಸಹ ಪಡೆದುಕೊಂಡಿರುತ್ತಾರೆ. ಪಂಚನಾಮೆ ಹಾಗೂ ಸಹಿಯನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ ಅದನ್ನು ಈಗಾಗಲೇ ನಿ.ಪಿ.–1 ಎಂದು ಗುರುತಿಸಿದ್ದು ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ನಾವು ಜಪ್ತಪಡಿಸಿಕೊಂಡ ಟ್ರಕ ನಂ ಕೆಎ–30/251ನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿಯು ಸದರಿ ಟ್ರಕ್ಕಿನ ಛಾಯಾ ಚಿತ್ರ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–2 ಮತ್ತು 3 ಎಂದು ಈಗಾಗಲೇ ಗುರುತಿಸಲಾಗಿದೆ. ಸದರಿ ಟ್ರಕ್ಕನ್ನು ಈಗ ಮಾನ್ಯ ನ್ಯಾಯಾಲಯದ ಆವರಣದಲ್ಲಿ ನೋಡುತ್ತಿದ್ದು ಅದನ್ನು ಮು.ಮಾ.–1 ಎಂದು ಗುರುತಿಸಲಾಗಿದೆ.. ನಂತರ ಈ ಬಗ್ಗೆ ಪ್ರಸ–1 ರವರು ಆರೋಪಿತರ ವಿರುದ್ಧ

ಪ್ರಕರಣ ದಾಖಲಿಸಿರುತ್ತಾರೆ. ಸಾರ್ವಜನಿಕರು ನಿ.ಪಿ–1 ಪಂಚನಾಮೆ ಕಾಲಕ್ಕೆ ಯಾರೂ ಬರದೇ ಇದ್ದ ಕಾರಣ ಇಲಾಖಾ ಸಿಬ್ಬಂದಿಯನ್ನೇ ಪಂಚರನ್ನಾಗಿ ತೆಗೆದುಕೊಳ್ಳಲಾಯಿತು. ನಂತರ ಮುಂದಿನ ಕ್ರಮಕ್ಕಾಗಿ ಆರೋಪಿತರನ್ನು ವಲಯ ಅರಣ್ಯಾಧಿಕಾರಿಗಳು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ದಿನಾಂಕ: 21–2–2004 ರಂದು ಸುಂಕಸಾಳ ವಾಚಮನ್‌ರ ಸಹಾಯದಿಂದ ಜಪ್ತಪಡಿಸಿದ ಸಾಗ ತುಂಡುಗಳ ಬುಡಚಿಯನ್ನು ಹುಡುಕಿದೆವು. ಸುಂಕಸಾಳ ಬ್ಲಾಕ್ 24–25 ರಲ್ಲಿ 14 ಬುಡಚಿಗಳು ಸಿಕ್ಕಿದ್ದು ಈ ಬಗ್ಗೆ ಪಂಚನಾಮೆ ಮಾಡಿರುತ್ತೇನೆ. ವಲಯ ಅರಣ್ಯಾಧಿಕಾರಿಗಳು ಈ ಬಗ್ಗೆ ದೋಷಾರೋಪಣಾ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅರ್ಜಿದಾರನು ಈ ಪ್ರಕರಣದ ಆರೋಪಿತನಾಗಿದ್ದು ವಾಹನ ನಂ. ಕೆಎ–30/251 ಟ್ರಕ್ಕನ್ನು ಅನಧಿಕೃತವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಾಟ ಮಾಡುವ ಉದ್ದೇಶ ಹೊಂದಿ ಅದಕ್ಕೆ ಪ್ರಯತ್ನಿಸಿದ್ದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಬೇಕೆಂದು ನನ್ನ ಪ್ರಾರ್ಥನೆ ಇದೆ. ಅರ್ಜಿದಾರನಾದ ಆರೋಪಿ ವಾಹನ ಚಾಲಕ ಗೋವಿಂದ ಬೇಡು ನಾಯ್ಕ ಇತನನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. (ಅರ್ಜಿದಾರರು ಗೈರು ಇರುತ್ತಾರೆ) ಎಂದು ಹೇಳಿಕೆ ನೀಡಿರುತ್ತಾರೆ.

**ಪಾಟೀ ಸವಾಲು ಅರ್ಜಿದಾರ ಪರ ವಕೀಲರಿಂದ:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಪಿಡಬ್ಲು–3** ಶ್ರೀ. ಸುರೇಶ ನಾರಾಯಣ ಪಡ್ತಿ, ಸಾ: ಸುಂಕಸಾಳ ಇವರು ತಮ್ಮ ಸಾಕ್ಷ್ಯದಲ್ಲಿ ನಾನು 1998ನೇ ಸಾಲಿನಿಂದ ನಾನು ಸುಂಕಸಾಳದಲ್ಲಿ ಅರಣ್ಯ ವೀಕ್ಷಕನಾಗಿ ಕೆಲಸ ಮಾಡುತ್ತಿದ್ದೇನೆ. ದಿನಾಂಕ: 19–02–2004 ರಂದು ರಾತ್ರಿ ನಾಗೇಶ ಮಹಾಲಕ್ಷ್ಮಿ ಹೆಸರಿನ ವಾಹನದಲ್ಲಿ ಸುಂಕಸಾಳ ಶಾಖಾ ಅಧೀನದಲ್ಲಿ ಸಾಗವಾನಿ ತುಂಡುಗಳನ್ನು ಸಾಗಿಸುತ್ತಿರುವ ಬಗ್ಗೆ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರಿಗೆ ಮಾಹಿತಿ ಬಂದಿತು. ಈ ವಿಷಯವನ್ನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ರಾತ್ರಿ ಗಸ್ತು ಕರ್ತವ್ಯದಲ್ಲಿದ್ದ ಶಾಖಾ ವನಪಾಲಕ ಮಾಸ್ತಿಕಟ್ಟಾ ಶ್ರೀ.ಹೆಚ್.ವಿ.. ನಾಯ್ಕ ಮತ್ತು ಬೀಟ ಗಾರ್ಡ ಶ್ರೀ. ಬಿ.ಜಿ. ರಾಣೆ, ಅಗಸೂರು ಹಾಗೂ ಸುಂಕಸಾಳ ಶಾಖಾ ವನಪಾಲಕರಾದ ಕೆ.ಎಲ್. ನಾಯ್ಕ, ಅರಣ್ಯ ರಕ್ಷಕ ಸಿ.ಡಿ. ಗುನಗಿ ಹಾಗೂ ನನಗೆ ತಿಳಿಸಿದರು. ನಂತರ ಈ ಮೇಲೆ ಹೇಳಿದ ನಾವೆಲ್ಲರೂ ಖಾಸಗಿ ವಾಹನ ಸಂಖ್ಯೆ: ಕೆಎ–14/ಎಂ.9001 ರಲ್ಲಿ ಮಾಹಿತಿ ಬಂದ ಸ್ಥಳಕ್ಕೆ ಗಸ್ತಿಗೆ ಹೋದೆವು. ಈ ರೀತಿ ನಾವು ಸುಂಕಸಾಳ ಹೈಲ್ಯಾಂಡ್ ಹೋಟೆಲ್ ವರೆಗೆ ಹೋದೆವು. ಪುನ: ತಿರುಗಿ ಬಂದು ಸುಂಕಸಾಳ ರಣಕಂಬದ ಹತ್ತಿರ ನಮ್ಮಲ್ಲಿದ್ದ ಮೂರು ಸಿಬ್ಬಂದಿಗಳನ್ನು ಅಲ್ಲಿ ಇಳಿಸಿದರು. ನಾನು ಹಾಗೂ ಇತರೇ ಸಿಬ್ಬಂದಿಗಳು ಖಾಸಗಿ ವಾಹನ ಸಮೇತ ಮಾಸ್ತಿಕಟ್ಟಾ ಸಮೀಪ ಹೊಸಕಂಬಿ ಓಣಿಗೆ ಬಂದೆವು. ಬಂದು ವಾಹನ ಶೋಧ ಕಾರ್ಯದಲ್ಲಿ ಸಿಬ್ಬಂದಿಯವರು ತೊಡಗಿದೆವು. ಮಾಹಿತಿ ಬಂದ ವಾಹನ ಬರದೇ ಇದ್ದ ಕಾರಣ ಬೆಳಗಿನ ಜಾವ ನಾವೆಲ್ಲರೂ ಅಗಸೂರಿಗೆ ಹೋದೆವು. ಅಗಸೂರಿನಲ್ಲಿ ಎನ್.ಹೆಚ್.–63 ರ ಬದಿಗೆ ಮಂಗಳೂರು ಹೋಟೆಲ ಇದ್ದು ಅದರ ಬದಿಯಲ್ಲಿ ಇಲಾಖೆಗೆ ಮಾಹಿತಿ ಬಂದ ವಾಹನ ಸಂಖ್ಯೆ: ಕೆಎ–30/251 ನಾಗೇಶ ಮಹಾಲಕ್ಷ್ಮಿ ಎಂಬ ಹೆಸರಿದ್ದ ಒಂದು ಟ್ರಕ್ಕು ನಿಂತಿತ್ತು. ಸದರಿ ಟ್ರಕ್ಕಿಗೆ ತಾಡಪತ್ರಿಯಿಂದ ಪೂರ್ತಿಯಾಗಿ ಮುಚ್ಚಲಾಗಿತ್ತು. ನಾನು ಹಾಗೂ ಇತರೇ ಸಿಬ್ಬಂದಿಗಳು ಹಾಗೂ ನಾನು ಸದರಿ ಟ್ರಕ್ಕನ್ನು ಪರೀಕ್ಷೆ ಮಾಡಿದೆವು. ಅದರಲ್ಲಿ ಸುಮಾರು 50 ಚೀಲ ಭತ್ತದ ಉಮ್ಮಿ ತುಂಬಿದ ಚೀಲಗಳು ಕಂಡು ಬಂದವು. ವಾಹನದಲ್ಲಿ ವಾಹನದ ಚಾಲಕನಾದ ಶ್ರೀ. ಗೋವಿಂದ ಬೇಡು ನಾಯ್ಕ ಇತರರು ಇದ್ದು ಇತನನ್ನು ಈ ಉಮ್ಮಿ ಚೀಲಗಳ ಬಗ್ಗೆ ಪ್ರಸ–1 ಮತ್ತು ಪ್ರಸ–2 ರವರು ವಿಚಾರಿಸಲಾಗಿ ಅದನ್ನು ಇಡಗುಂದಿ ಮಿಲ್ಲಿನಿಂದ ತಂದಿರುವದಾಗಿ ತಿಳಿಸಿದರು. ಅದಕ್ಕೂ ಮೊದಲು ಅಂಕೋಲಾದಿಂದ ಅದೇ ವಾಹನದಲ್ಲಿ ಕೆಂಪು ಚೀರೆ ಕಲ್ಲನ್ನು ಇಡಗುಂದಿಗೆ ಸಾಗಿಸಿರುವದಾಗಿ ತಿಳಿಸಿರುತ್ತಾನೆ. ಆದರೆ ವಾಹನ ಪರಿಶೀಲಿಸಲಾಗಿ, ಅದರಲ್ಲಿ ಕೆಂಪು ಕಲ್ಲು ತುಂಬಿದ ಬಗ್ಗೆ ಯಾವುದೇ ಕುರುಹುಗಳು ಕಂಡು ಬಾರದೇ ಇದ್ದದರಿಂದ ಹೆಚ್ಚಿನ ತನಿಖೆಗಾಗಿ ಸದರಿ ವಾಹನವನ್ನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾರವರ ಕಚೇರಿಗೆ ತರಲಾಯಿತು. ನಾವು ವಾಹನ ಪರೀಕ್ಷೆ ಮಾಡುವ ಕಾಲಕ್ಕೆ ವಾಹನದಲ್ಲಿ ಓರ್ವ ಮಂಜುನಾಥ ಗಣಪತಿ ನಾಯ್ಕ ಸಹ ಇದ್ದರು. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ರವರಾದ ಶ್ರೀ. ಪ್ರಕಾಶ ರವರು ಗೋವಿಂದ ಬೇಡು ನಾಯ್ಕ ಇತನ ಹತ್ತಿರ ಈ ಬಗ್ಗೆ ದೀರ್ಘ ವಿಚಾರಣೆ ನಡೆಸಿದ್ದು ಆಗ ಗೋವಿಂದ ಬೇಡು ನಾಯ್ಕ ಇತನು ತಾನು ಸದರಿ ವಾಹನದಲ್ಲಿ ಸಾಗವಾನಿ ತುಂಡುಗಳನ್ನು ತುಂಬಲು ಬಂದಿದ್ದು ನಿಜವೆಂದು ತಿಳಿಸಿರುತ್ತಾನೆ. ಹಾಗೂ ತಾನು ಸಂಜು ಪಾಂಡುರಂಗ ನಾಯ್ಕ, ಅಂಕೋಲಾ ಇವರ ಸಲಹೆ ಮೇರೆಗೆ ಹೆಬ್ಬುಳ ಹಾಗೂ ಸುಂಕಸಾಳ ಅರಣ್ಯ ಪ್ರದೇಶದಲ್ಲಿ ತಯಾರಿಸಿಟ್ಟ ತುಂಡುಗಳನ್ನು ತರಲು ಹೊರಟ್ಟಿದ್ದಾಗಿ ತಿಳಿಸಿದನು. ಮತ್ತು ಈ ರೀತಿ ತಾನು ಸಾಗವಾನಿ ತುಂಡುಗಳನ್ನು ತುಂಬಲು ಹೋಗಬೇಕಾದರೆ ತಾನು ಊಟ ಮಾಡಲು ನಿಂತ ದಾಬಾದ ಬಳಿ ಸಂಜು ಪಾಂಡುರಂಗ ನಾಯ್ಕ ಇತನು ಬಂದು ಅರಣ್ಯ ಸಿಬ್ಬಂದಿಗಳಿಗೆ ಸಂಶಯ ಬಂದ ಕಾರಣ ಸಾಗ ತುಂಡುಗಳನ್ನು ತುಂಬುವದು ಬೇಡ ಎಂದ ಕಾರಣ ತಾನು ಅಲ್ಲಿಯೇ ವಾಹನವನ್ನು ನಿಲ್ಲಿಸಿಟ್ಟ ಬಗ್ಗೆ ಹೇಳಿದನು. ಮತ್ತು ಭತ್ತದ ಉಮ್ಮಿಯ ಚೀಲಗಳನ್ನು ತೆಗೆದುಕೊಂಡು ಹೋಗಿ ಸಾಗವಾನಿ ತುಂಡುಗಳನ್ನು ತುಂಬಿ ಬರಲು ಯೋಜನೆ ಮಾಡಿದ ಬಗ್ಗೆ ತಿಳಿಸಿದನು. ಹಾಗೂ ಸದರಿ ಸಾಗವಾನಿ ತುಂಡುಗಳನ್ನು ಇಟ್ಟ ಸ್ಥಳವನ್ನು ತಾನು ತೋರಿಸುತ್ತೇನೆ ಎಂದು ಹೇಳಿದ ಮೇರೆಗೆ ಗೋವಿಂದ ಹಾಗೂ ಮಂಜು ಮತ್ತು ಸಿಬ್ಬಂದಿಗಳ ಜೊತೆ ನಾನು ಸುಂಕಸಾಳಕ್ಕೆ ಹೋಗಿರುತ್ತೇನೆ. ಗೋವಿಂದ ಬೇಡು ನಾಯ್ಕ ಇತನು ನಮ್ಮನ್ನು ಸುಂಕಸಾಳ ಬ್ಲಾಕ್ 24 ಮತ್ತು 25ರಲ್ಲಿ ಕರೆದುಕೊಂಡು ಹೋಗಿ ದಾಸ್ತಾನು ಇಟ್ಟ ಸಾಗ ತುಂಡುಗಳನ್ನು ತೋರಿಸಿದ್ದು ಅದನ್ನು ನಾವು ಪರಿಶೀಲನೆ ಮಾಡಿದ್ದೆವು. ಪರಿಶೀಲಿಸಿ ನೋಡಲಾಗಿ ಅಲ್ಲಿ ಒಟ್ಟೂ 45 ಸಾಗವಾನಿ ತುಂಡುಗಳು ಇದ್ದು ಅದಕ್ಕೆ ಯಾವುದೇ ಇಲಾಖಾ ಛಪ್ಪಾ ವಗೈರೆ ಇರಲಿಲ್ಲ. ಅದನ್ನು ಅಳತೆ ಮಾಡಲಾಗಿ ಒಟ್ಟೂ ತುಂಡು 3.222 ಘ.ಮೀ. ಇದ್ದು ಪ್ರತಿಯೊಂದು ತುಂಡುಗಳಿಗೆ ನಂಬರನ್ನು ಹಾಗಿ ಗುನ್ನಾ ಛಪ್ಪಾವನ್ನು ಅರಣ್ಯ ಸಿಬ್ಬಂದಿಯವರು ಹಾಕಿದರು. ಸಿಬ್ಬಂದಿಗಳು ಸದರ ಸಾಗವಾನಿ ತುಂಡು ಇದ್ದ ಸ್ಥಳದಲ್ಲಿ ಪಂಚನಾಮೆಯನ್ನು ಮಾಡಿ ಸಾಗ ತುಂಡುಗಳನ್ನು ಜಪ್ತಪಡಿಸಿಕೊಂಡರು. ನಂತರ ಆರೋಪಿತರು ಹಾಗೂ ಜಪ್ತಪಡಿಸಿದ ಸಾಗವಾನಿ ತುಂಡುಗಳನ್ನು ಖಾಸಗಿ ವಾಹನದಲ್ಲಿ ತುಂಬಿಕೊಂಡು ಮರಳಿ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರ ಕಚೇರಿಗೆ ಬಂದು ನಮ್ಮ ಪಂಚನಾಮೆಯನ್ನು ಮುಂದುವರಿಸಿ ಕಚೇರಿ ಎದುರಗಡೆಯಿದ್ದ ವಾಹನ ಸಂಖ್ಯೆ: ಕೆಎ–30/251 ಟ್ರಕ್ಕನ್ನು ಜಪ್ತಪಡಿಸಿಕೊಂಡರು. ಆರೋಪಿತರು ಸದರಿ ವಾಹನದ ಮುಖಾಂತರ ಜಪ್ತಪಡಿಸಿಕೊಂಡ ಸಾಗವಾನಿ ತುಂಡುಗಳನ್ನು ಅನಧಿಕೃತವಾಗಿ ಸಾಗಾಟ ಮಾಡುವ ಉದ್ದೇಶ ಹೊಂದಿದ್ದರಿಂದ ಸಿಬ್ಬಂದಿಗಳು ಸದರಿ ವಾಹನವನ್ನು ಪಂಚನಾಮೆಯೊಂದಿಗೆ ಜಪ್ತಪಡಿಸಿಕೊಂಡಿರುತ್ತಾರೆ. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ಬಗ್ಗೆ ಗೋವಿಂದ ಬೇಡು ನಾಯ್ಕ ಇತನ ಹೇಳಿಕೆಯನ್ನು ಸಹ ಪಡೆದುಕೊಂಡಿರುತ್ತಾರೆ. ಪಂಚನಾಮೆ ಹಾಗೂ ಸಹಿಯನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ ಅದನ್ನು ಈಗಾಗಲೇ ನಿ.ಪಿ.–1 ಎಂದು ಗುರುತಿಸಿದ್ದು ಸಾಕ್ಷಿ ಸಹಿಯನ್ನು ನಿ.ಪಿ–1ಸಿ ಎಂದು ಗುರುತಿಸಲಾಯಿತು. ನಾವು

ಜಪ್ತಪಡಿಸಿಕೊಂಡ ಟ್ರಕ್ ನಂ ಕೆಎ–30/251ನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿಯು ಸದರಿ ಟ್ರಕ್ಕಿನ ಛಾಯಾ ಚಿತ್ರ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–2 ಮತ್ತು 3 ಎಂದು ಈಗಾಗಲೇ ಗುರುತಿಸಲಾಗಿದೆ. ಸದರಿ ಟ್ರಕ್ಕನ್ನು ಈಗ ಮಾನ್ಯ ನ್ಯಾಯಾಲಯದ ಆವರಣದಲ್ಲಿ ನೋಡುತ್ತಿದ್ದು ಅದನ್ನು ಮು.ಮಾ.–1 ಎಂದು ಗುರುತಿಸಲಾಗಿದೆ.. ನಂತರ ಈ ಬಗ್ಗೆ ಪ್ರಸ–1 ರವರು ಆರೋಪಿತರ ವಿರುದ್ಧ ಪ್ರಕರಣ ದಾಖಲಿಸಿರುತ್ತಾರೆ. ಸಾರ್ವಜನಿಕರು ನಿ.ಪಿ–1 ಪಂಚನಾಮೆ ಕಾಲಕ್ಕೆ ಯಾರೂ ಬರದೇ ಇದ್ದ ಕಾರಣ ನಾನು ಪಂಚನಾಗಿ ನಿ.ಪಿ–1ಕ್ಕೆ ಸಹಿ ಮಾಡಿರುತ್ತೇನೆ. ನಂತರ ಮುಂದಿನ ಕ್ರಮಕ್ಕಾಗಿ ಆರೋಪಿತರನ್ನು ವಲಯ ಅರಣ್ಯಾಧಿಕಾರಿಗಳು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ದಿನಾಂಕ: 21–2–2004 ರಂದು ಸುಂಕಸಾಳದಲ್ಲಿ ನಾನು ಹಾಗೂ ಇನ್ನೊಬ್ಬ ವಾಚಮನ್ ಫಿಲಿಪ ಫರ್ನಾಂಡಿಸ್ ಜಪ್ತಪಡಿಸಿದ ಸಾಗ ತುಂಡುಗಳ ಬುಡಚಿಯನ್ನು ಹುಡುಕಿದೆವು. ಸುಂಕಸಾಳ ಬ್ಲಾಕ್ 24–25 ರಲ್ಲಿ 14 ಬುಡಚಿಗಳು ಸಿಕ್ಕಿದ್ದು ಈ ಬಗ್ಗೆ ಪಂಚನಾಮೆ ಮಾಡಲಾಗಿದೆ. ಅರ್ಜಿದಾರನಾದ ಆರೋಪಿ ವಾಹನ ಚಾಲಕ ಗೋವಿಂದ ಬೇಡು ನಾಯ್ಕ ಇತನನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. (ಅರ್ಜಿದಾರರು ಗೈರು ಇರುತ್ತಾರೆ) ಎಂದು ಹೇಳಿಕೆ ನೀಡಿರುತ್ತಾರೆ.

**ಪಾಟೀ ಸವಾಲು ಅರ್ಜಿದಾರ ಪರ ವಕೀಲರಿಂದ:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಪಿಡಬ್ಲು–4** ಶ್ರೀ. ಕೆ.ಜಿ. ಪ್ರಕಾಶ, ವಲಯ ಅರಣ್ಯಾಧಿಕಾರಿ ಇವರು ತಮ್ಮ ಸಾಕ್ಷ್ಯದಲ್ಲಿ ನಾನು ದಿನಾಂಕ: 26–05–2003 ರಿಂದ 29–05–2006 ರ ವರೆಗೆ ನಾನು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಎಂತಾ ಕರ್ತವ್ಯ ನಿರ್ವಹಿಸಿದ್ದು ಇರುತ್ತದೆ. ದಿನಾಂಕ: 19–02–2004 ರಂದು ರಾತ್ರಿ ಸಮಯದಲ್ಲಿ ನಾನು ಗಸ್ತು ತಿರುಗುತ್ತಿದ್ದಾಗ ನನಗೆ ಒಂದು ಲಾರಿಯಲ್ಲಿ ಸಾಗವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಟಾ ಮಾಡುತ್ತಿದ್ದ ಬಗ್ಗೆ ನನಗೆ ಮಾಹಿತಿ ಬಂದಿತು. ಕಾರಣ ಈ ವಿಷಯವನ್ನು ನಾನು ಗಸ್ತು ಕರ್ತವ್ಯದಲ್ಲಿದ್ದ ನನ್ನ ಸಿಬ್ಬಂದಿಗಳಾದ ಶ್ರೀ. ಕುಸ್ಲಪ್ಪ ನಾಯ್ಕ ಪಿಡ್ಲು–1, ಶ್ರೀ. ಹೆಚ್.ವಿ. ನಾಯ್ಕ ಹಾಗೂ ವಾಮನ ಸುಬ್ರಾಯ ನಾಯ್ಕ ಪಿಡಬ್ಲು–3 ಹಾಗೂ ಎನ್.ಬಿ. ತಾಂಡೇಲ ಇವರಿಗೆ ಈ ವಿಷಯವನ್ನು ತಿಳಿಸಿ ಈ ಬಗ್ಗೆ ಸೂಕ್ತ ಗಸ್ತು ಕೈಕೊಂಡು ಕ್ರಮ ಕೈಕೊಳ್ಳಲು ತಿಳಿಸಿದೆನು. ಅದರಂತೆ ಅವರು ಎನ್.ಹೆಚ್–63ರ ಅಗಸೂರಿನಲ್ಲಿ ಮಂಗಳೂರು ಹೋಟೆಲ್ ಹತ್ತಿರ ವಾಹನ ಸಂಖ್ಯೆ: ಕೆಎ–30/251ನ್ನು ಪಂಚನಾಮೆಯಡಿ ಜಪ್ತಮಾಡಿಕೊಂಡು ಹಾಗೂ ಅದರಲ್ಲಿದ್ದ ಸಾಗವಾನಿ ತುಂಡುಗಳನ್ನು ಜಪ್ತಪಡಿಸಿಕೊಂಡು ದಿನಾಂಕ: 20–02–2004 ರಂದು ಸದ್ರಿ ಸಿಬ್ಬಂದಿಗಳು ಆರೋಪಿತರಾದ ಗೋವಿಂದ ಬೇಡು ನಾಯ್ಕ ಹಾಗೂ ಮಂಜುನಾಥ ಗಣಪತಿ ನಾಯ್ಕ ಮತ್ತು ಒಂದು ವಾಹನ ಸಂಖ್ಯೆ: ಕೆಎ–30/251 ನ್ನು ನನ್ನ ಸಮಕ್ಷಮ ಹಾಜರುಪಡಿಸಿರುತ್ತಾರೆ. ನನ್ನ ಸಮಕ್ಷಮ ಹಾಜರುಪಡಿಸದಂತ ವ್ಯಕ್ತಿ ಈಗ ನ್ಯಾಯಾಲಯದ ಮುಂದೆ ಇರುತ್ತಾರೆ. ನಾನು ಸದ್ರಿ ಆರೋಪಿತರನ್ನು ವಿಚಾರಣೆಗೆ ಒಳಪಡಿಸಿದೆನು. ಹಾಗೂ ಆತ ನನ್ನ ಸಮಕ್ಷಮ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ತನ್ನ ಹೇಳಿಕೆಯನ್ನು ನೀಡಿರುತ್ತಾನೆ. ಪಂಚನಾಮೆಯಡಿ ಜಪ್ತಪಡಿಸಿಕೊಂಡಂತಹ ವಾಹನ ಹಾಗೂ ಸಾಗವಾನಿ ತುಂಡುಗಳ ಬಗ್ಗೆ ಜಪ್ತ ವರದಿಯನ್ನು ತಯಾರಿಸಿ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಜಪ್ತ ವರದಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–5 ಎಂದು ಪ್ರಸ–1 ಇವರ ಮುಖಾಂತರ ನಿಶಾನೆಗೊಳಿಸಿದ್ದು ಸಾಕ್ಷಿ ಸಹಿಯನ್ನು ನಿ.ಪಿ–5ಎ ಎಂದು ಗುರುತಿಸಲಾಯಿತು. ಸಾಕ್ಷಿ ಜಪ್ತ ಪಡಿಸಿಕೊಂಡ ವಾಹನ ಟ್ರಕ್ ನಂ ಕೆಎ–30/251ನೇದರ ಛಾಯಾ ಚಿತ್ರಗಳನ್ನು ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ಸಾಕ್ಷಿ ನ್ಯಾಯಾಲಯದ ಆವರಣದಲ್ಲಿರುವ ಟ್ರಕ್ಕನ್ನು ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ಮು.ಮಾ–1 ಎಂದು ಗುರುತಿಸಲಾಗಿದೆ. ನಂತರದಲ್ಲಿ ಪ್ರಸ–1 ರವರು ತನಿಖಾ ವರದಿಯನ್ನು ನನಗೆ ಸಲ್ಲಿಸಿರುತ್ತಾರೆ. ಅವರ ತನಿಖಾ ವರದಿಯನ್ನು ಆಧರಿಸಿ ನಾನು ತನಿಖೆಯನ್ನು ಕೈಕೊಂಡು ಅದನ್ನು ಪೂರ್ಣಗೊಳಿಸಿ ಮಾನ್ಯ ನ್ಯಾಯಾಲಯಕ್ಕೆ ಆರೋಪಿತರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ಹಾಗೂ ಜಪ್ತಾದ ವಾಹನದ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯಕ್ಕೆ ವರದಿಯೊಂದಿಗೆ ನಿವೇದಿಸಿಕೊಂಡಿರುತ್ತೇನೆ. ಜಪ್ತಾದ ವಾಹನವನ್ನು ಅರಣ್ಯ ಅಪರಾಧ ಪ್ರಕರಣಕ್ಕೆ ಉಪಯೋಗಿಸಿರುವದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೇಳಿಕೊಳ್ಳುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

**ಪಾಟೀ ಸವಾಲು ಶ್ರೀ. ಚರಣ್ ಡಿ. ನಾಯ್ಕ ವಕೀಲರಿಂದ :**

ಬಾತ್ಮಿಯು ನನಗೆ ದಿನಾಂಕ: 19–02–2004 ರ 10 ಗಂಟೆಗೆ ಬಂದಿರುತ್ತದೆ. ಮರಕಡಿದ ಸ್ಥಳದಿಂದ ವಾಹನವನ್ನು ಜಪ್ತಮಾಡಿದ ಸ್ಥಳಕ್ಕೆ ವಾಹನದಲ್ಲಿ ಬರಬೇಕಾದರೆ ಸುಮಾರು ಅರ್ಧ ಗಂಟೆ ಸಮಯ ಬೇಕಾಗುತ್ತದೆ. ಜಪ್ತಪಡಿಸಿದ ತುಂಡುಗಳನ್ನು ಸಾಗವಾನಿ ತುಂಡುಗಳೆಂದು ಗುರುತಿಸಲು ನನಗೆ ನನ್ನ ತರಬೇತಿ ಅವಧಿಯಲ್ಲಿ ತರಬೇತಿ ನೀಡಿರುತ್ತಾರೆ ಆ ಮೇರೆಗೆ ಅವುಗಳನ್ನು ನಾನು ಸಾಗವಾನಿ ತುಂಡುಗಳೆಂದು ಗುರುತಿಸಿದ್ದೇನೆ. ಜಪ್ತಪಡಿಸಿದ ತುಂಡಗಳನ್ನು ಸಾಗವಾನಿ ತುಂಡುಗಳೆಂದು ಗುರುತಿಸಲು ನಾನು ಯಾವುದೇ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿರುವದಿಲ್ಲ. ಕಾರಣ, ನಾವೇ ಸ್ವತ: ಅದನ್ನು ಗುರುತಿಸಲು ತರಬೇತಿಯನ್ನು ಪಡೆದುಕೊಂಡಿರುತ್ತೇವೆ. ನಾವು ಪಂಚನಾಮೆಯಡಿ ಜಪ್ತಪಡಿಸಿಕೊಂಡ ಕಟ್ಟಿಗೆ ತುಂಡುಗಳು ಸಾಗ ತುಂಡಗಳಲ್ಲಾ ಎಂದರೆ ಸರಿಯಲ್ಲ. ಅರ್ಜಿದಾರ ಆರೋಪಿತರು ಯಾವುದೇ ಸಾಗ ತುಂಡುಗಳನ್ನು ಕಳ್ಳ ಸಾಗಾಣಿಕೆಯಿಂದ ತಮ್ಮ ವಾಹನದಲ್ಲಿ ಸಾಗಾಟ ಮಾಡುತ್ತಿರಲ್ಲಿಲ್ಲ ಎಂದರೆ ಸರಿಯಲ್ಲ. ಚಹಾ ಕುಡಿಯಲು ಮಂಗಳೂರು ಹೋಟೆಲ್ ಬಳಿ ನಿಲ್ಲಿಸಿದ್ದ ಅರ್ಜಿದಾರರ ವಾಹನವನ್ನು ಅರಣ್ಯ ಇಲಾಖೆಯ ಸಿಬ್ಬಂದಿಗಳು ಜಪ್ತಪಡಿಸಿಕೊಂಡಿದ್ದಾರೆ ಎಂದರೆ ಸರಿಯಲ್ಲ. ಈ ಪ್ರಕರಣಕ್ಕೂ ಹಾಗೂ ಅರ್ಜಿದಾರ ಆರೋಪಿತನಿಗೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ಅರ್ಜಿದಾರನು ನನ್ನ ಸಮಕ್ಷಮ ಯಾವುದೇ ಹೇಳಿಕೆಯನ್ನು ನೀಡಿಲ್ಲ ಎಂದರೆ ಸರಿಯಲ್ಲ. ನನ್ನ ಸಿಬ್ಬಂದಿಗಳು ನೀಡಿದಂತಹ ಸುಳ್ಳು ದೂರಿಗೆ ಅನುಸರಿಸಿ ನಾನು ತನಿಖೆ ಕೈಕೊಂಡು ಇಂದು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಎಂದು ಹೇಳಿಕೆ ನೀಡಿರುತ್ತಾರೆ.

**ಅಂಶ ನಂ. (ಅ):**

ದಿನಾಂಕ: 19–02–2004 ರಂದು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರಿಗೆ ನಾಗೇಶ–ಮಹಾಲಕ್ಷ್ಮಿ ಎಂಬ ವಾಹನದಲ್ಲಿ ಕಳ್ಳಸಾಗಾಣಿಕೆಯಿಂದ ಕಟ್ಟಿಗೆ ಸಾಗಿಸುತ್ತಿರುವ ಬಗ್ಗೆ ಖಚಿತ ಬಾತ್ಮಿ ಬಂದ ಮೇರೆಗೆ ಸಿಬ್ಬಂದಿಗಳಿಗೆ ರಾತ್ರಿ ಗಸ್ತು ಮಾಡಲು ಸೂಚಿಸಿದಂತೆ ಸಿಬ್ಬಂದಿಗಳಾದ ಶಾಖಾ ವನಪಾಲಕ ಮಾಸ್ತಿಕಟ್ಟಾ, ಅರಣ್ಯ ರಕ್ಷಕ ಅಗಸೂರು, ಶಾಖಾ ವನಪಾಲಕ ಸುಂಕಸಾಳ, ಅರಣ್ಯರಕ್ಷಕ ಸುಂಕಸಾಳ ಇವರು ಖಾಸಗಿ ವಾಹನ ಸಂಖ್ಯೆ:

ಕೆಎ–14/ಎಂ.9001ನೇದರಲ್ಲಿ ಗಸ್ತು ತಿರುಗುತ್ತಾ ಹೈಲ್ಯಾಂಡ್, ಸುಂಕಸಾಳ, ಹೊಸಕಂಬಿ ಪ್ರದೇಶದಲ್ಲಿ ಪೆಟ್ರೋಲಿಂಗ್ ಮಾಡುತ್ತಾ ಪುನ: ತಿರುಗಿ ಬಂದು ಸುಂಕಸಾಳ ಶಾಖಾ ಹದ್ದಿಯ ಬ್ಲಾಕ್ 24–25ರ ಕೋಟೆಪಾಲ ರೋಡಿನಲ್ಲಿ ರಣಕಂಬದ ಹತ್ತಿರ ಗಸ್ತುನಲ್ಲಿರುವಾಗ ಸುಮಾರು ಬೆಳಗ್ಗಿನ ಜಾವ 5.30 ಘಂಟೆಗೆ ಎನ್.ಹೆಚ್–63ರ ಮಂಗಳೂರು ಹೋಟೆಲ್ ಬದಿಯಲ್ಲಿ ಪೂರ್ಣ ತಾಡಪತ್ರೆ ಕಟ್ಟಿದ ಕೆಎ–30/251 ವಾಹನ ನಿಂತಿರುವದನ್ನು ಗಮನಿಸಿ ಅಲ್ಲಿಗೆ ಹೋಗಿ ವಾಹನ ಚಾಲಕರನ್ನು ವಿಚಾರಿಸಲಾಗಿ ಅವರು ಅಸ್ಪಷ್ಟ ಉತ್ತರ ನೀಡಿರುವದರಿಂದ ಹೆಚ್ಚಿನ ವಿಚಾರಣೆಗಾಗಿ ಸದರ ವಾಹನವನ್ನು ಚಾಲಕನ ಸಹಾಯದಿಂದ ಮಾಸ್ತಿಕಟ್ಟಾ ವಲಯ ಕಚೇರಿಗೆ ಕರೆತಂದು ನಂತರ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಸುದೀರ್ಘವಾಗಿ ವಾಹನ ಚಾಲಕನನ್ನು ವಿಚಾರಿಸಲಾಗಿ ಆಗ ವಾಹನ ಚಾಲಕ/ಮಾಲೀಕನಾದ ಗೋವಿಂದ ಬೇಡು ನಾಯ್ಕ ಇತನು ತಾನು ಸದರ ವಾಹನದಲ್ಲಿ ಸಾಗವಾನಿ ತುಂಡುಗಳನ್ನು ತುಂಬಲು ಬಂದಿದ್ದು ನಿಜವಿರುವದಾಗಿ ಹಾಗೂ ತಾನು ಇದನು ಸಂಜು ಪಾಂಡುರಂಗ ನಾಯ್ಕ, ಸಾ: ಅಂಕೋಲಾ ಇವರ ಸಲಹೆ ಮೇರೆಗೆ ಹೆಬ್ಬುಳ ಹಾಗೂ ಸುಂಕಸಾಳ ಅರಣ್ಯ ಪ್ರದೇಶದಲ್ಲಿ ತಯಾರಿಸಲ್ಪಟ್ಟ ತುಂಡುಗಳನ್ನು ತರಲು ಹೊರಟಿರುವದಾಗಿ ಹೇಳಿರುತ್ತಾರೆ.

ಸದರ ಸಾಗವಾನಿ ತುಂಡುಗಳು ಇದ್ದ ಸ್ಥಳವನ್ನು ಸಹ ತೋರಿಸುವದಾಗಿ ತಿಳಿಸಿದ ಮೇರೆಗೆ ಅವನ ಜೊತೆ ಸಿಬ್ಬಂದಿಗಳು/ಸಾಕ್ಷಿದಾರರು ಸದರ ಸಾಗವಾನಿ ತುಂಡುಗಳನ್ನು ದಾಸ್ತಾನು ಇಟ್ಟ ಸ್ಥಳವಾದ ಸುಂಕಸಾಳ ಬ್ಲಾಕ್–24–25ರಲ್ಲಿ ಹೋಗಿ ಪರಿಶೀಲಿಸಿ ನೋಡಲಾಗಿ ಅಲ್ಲಲ್ಲಿ ರಸ್ತೆ ಬದಿಗೆ ಚಿಪಡದಲ್ಲಿ ತುಂಡುಗಳು ದಾಸ್ತಾನು ಇಟ್ಟಿದ್ದು ಕಂಡು ಬಂದಿತು. ಸದರ ತುಂಡುಗಳು ತಾಜಾ ಹಸಿ ತುಂಡುಗಳು ಇದ್ದು ಯಾವುದೇ ನಂಬರ ವಗೈರೆ ಇರಲಿಲ್ಲ ಇವುಗಳು ಅನಧಿಕೃತ ತುಂಡುಗಳು ಎಂದು ಖಾತ್ರಿ ಮಾಡಿಕೊಂಡು ಪಂಚನಾಮೆಯಿಂದ ಅವುಗಳ ಅಳತೆಯನ್ನು ಮಾಡಲಾಗಿ ಅವು ಸಾಗ ಜಾತಿಯ 45 ತುಂಡುಗಳು 3.222 ಘ.ಮೀ. ಇದ್ದದ್ದು ಕಂಡು ಬಂದು ಅದಕ್ಕೆ ಟೀ ನಿಶಾನೆ ಚಪ್ಪಾ ಹೊಡೆದು ಅದನ್ನು ಇಲಾಖಾ ತಾಬಾ ಪಡಕೊಳ್ಳಲಾಯಿತು. ಸದರ ವಾಹನದ ಚಾಲಕರಾದ ಶ್ರೀ. ಗೋವಿಂದ ಬೇಡು ನಾಯ್ಕ, ಸಾ: ವಂದಿಗೆ, ಅಂಕೋಲಾ ಇವರು ಸ್ವತ: ಮಾಲೀಕರಾಗಿದ್ದು ಮತ್ತು ಸದರ ವಾಹನವು ಗುನ್ನೆಯಲ್ಲಿ ಬಳಸಿದ ಬಗ್ಗೆ ಅದನ್ನು (ನಿ.ಪಿ– 1ರಿಂದ ನಿ.ಪಿ–5) ದಾಖಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ಪಿಡಬ್ಲು–4** ಇವರು ನೀಡಿದ ಹೇಳಿಕೆಯು ಕೂಡ ಸದರ ಗೂಡ್ಸ ರಿಕ್ಷಾ ವಾಹನ ಮತ್ತು ಸಾಗ ತುಂಡುಗಳನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ ಹಾಗೂ ಈ ಅಂಶವು ಪುರಾವೆ ಆಗಿರುತ್ತದೆ.

**ಅಂಶ ನಂ. (ಇ):**

ದಿನಾಂಕ: 19–02–2004 ರಂದು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 7/2003–04, ದಿನಾಂಕ: 20–02–2004 ಪಂಚನಾಮೆ, ಸೀಜರ್ ರಿಪೋರ್ಟ, ವಿಚಾರಣಾ ವರದಿ ಹಾಗೂ ವಾಹನದ ಛಾಯಾ ಚಿತ್ರ **(ನಿ.ಪಿ–1 ರಿಂದ ನಿ.ಪಿ–5)** ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರನು ತನ್ನ ಸ್ವಂತ ಟಾಟಾ ಟ್ರಕ್ ವಾಹನ ಸಂಖ್ಯೆ: ಕೆಎ–30/251 ನೇದರಲ್ಲಿ ಈ ಹಿಂದೆ ನಾಲ್ಕುಬಾರಿ ಕಳ್ಳಸಾಗಾಣಿಕೆಯಿಂದ ಕಟ್ಟಿಗೆಯನ್ನು ಸಾಗಿಸಿರುವ ಬಗ್ಗೆ ವಿಚಾರಣೆ ಕಾಲಕ್ಕೆ ಹೇಳಿರುತ್ತಾರೆ. ಮತ್ತು ಈ ಗುನ್ನೆಗೆ ಸಂಬಂಧಪಟ್ಟಂತೆ ಸದರ ವಾಹನದಲ್ಲಿಯೇ ಸಾಗಿಸಲು ಸುಂಕಸಾಳ ಬ್ಲಾಕ್–24–25ರಲ್ಲಿ ಸಾಗ ತುಂಡುಗಳು 45=3.222 ಘ.ಮೀನ್ನು ತಯಾರಿಸಿ ಇಟ್ಟಿರುವದನ್ನು ತನಿಖಾಧಿಕಾರಿಗಳ ಸಮಕ್ಷಮ ಒಪ್ಪಿಕೊಂಡಿರುತ್ತಾರೆ. ಈ ರೀತಿ ಅರಣ್ಯಗುನ್ನೆಯಲ್ಲಿ ಭಾಗಿಯಾಗಿರುವದು ನಿಜವಿರುವದಾಗಿ ಒಪ್ಪಿಕೊಂಡಿದ್ದಾನೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಟಾಟಾ ಟ್ರಕ್ ವಾಹನ ಸಂಖ್ಯೆ: ಕೆಎ–30/521 ನೇದನ್ನು ಕಳ್ಳಸಾಗಾಣಿಕೆ ಬಳಸಿಕೊಂಡಿರುವದು ಮತ್ತು ಇಲ್ಲಿ ಅಪರಾಧಿಯೇ ಸ್ವತ: ಚಾಲಕ ಹಾಗೂ ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಕಾನೂನು ಅಧಿಕಾರಿಗಳು (ಕಿ) ರವರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಮುಂದುವರಿದು ಕಾನೂನು ಅಧಿಕಾರಿಗಳು (ಕಿ) ರವರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಕಾನೂನು ಅಧಿಕಾರಿಗಳು (ಕಿ) ರವರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಟಾಟಾ ಟ್ರಕ್ ವಾಹನ ಸಂಖ್ಯೆ: ಕೆಎ–30/251 ಇದು ದಿನಾಂಕ: 19–02–2004 ರಂದು ಪ್ರಥಮ ಮಾಹಿತಿ ಸಂಖ್ಯೆ: 7/2003–04, ದಿನಾಂಕ: 20–02–2004 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ ಕೊರೆದ ನಗಗಳು 31=0.217 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

## ಆದೇಶ

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ

ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಟಾಟಾ ಟ್ರಕ್ ವಾಹನ ಸಂಖ್ಯೆ: KA–30/251 ಮತ್ತು ಅದರಲ್ಲಿದ್ದ ಸಾಗ ನಗಗಳು 45=3.222 ಘ.ಮೀ. ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

1) ನೋಂದಣಿ ಸಂಖ್ಯೆ : KA-30/251

2) ಇಂಜಿನ್ ನಂಬರ : 692 D01977383

3) ಚಾಸಿ ನಂಬರ : KA-30/1165

4) ವಾಹನದ ಮಾದರಿ : ಟಾಟಾ ಟ್ರಕ್ (ನಾಲ್ಕು ಗಾಲಿ)

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 24–07–2015 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**CERTIFIED COPY**

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**ಕ್ರ.ಸಂ:ಎ1/ಎಫ್‌ಓಸಿ/ವಿವ–24/2003–04, ಕಾರವಾರ, ದಿನಾಂಕ:24–07–2015.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ಪೊಲೀಸ್ ಉಪ ನಿರೀಕ್ಷಕರು,
ಕಾರವಾರ ಶಹರ ಠಾಣಾ, ಕಾರವಾರ ತಾಲೂಕು: ಕಾರವಾರ.
(ಸರ್ಕಾರದ ಪರವಾಗಿ ಕಾನೂನು ಅಧಿಕಾರಿಗಳು (ಕಿ) ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ದತ್ತಾರಾಮ ಸದಾನಂದ ಸಾಳಗಾಂವಕರ
ಸಾ: ತಾಮ್ಸೇವಾಡಾ, ಕೋಡಿಬಾಗ, ತಾಲೂಕು: ಕಾರವಾರ. ಜಿಲ್ಲೆ: ಉತ್ತರಕನ್ನಡ.
(ಅರ್ಜಿದಾರರ ಪರವಾಗಿ ಶ್ರೀ. ಎಸ್.ಹೆಚ್.ತಾಮ್ಸೆ, ವಕೀಲರು)

**ಪ್ರಸ್ತಾವನೆ :**

1. ದಿನಾಂಕ: 21–11–2013 ರಂದು ಸಾಯಂಕಾಲ 4.00 ಘಂಟೆಯ ಸಮಯಕ್ಕೆ ಶ್ರೀ. ಪ್ರಸಾದ ಗೋಖಲೆ, ಆರಕ್ಷಕ ಉಪನಿರೀಕ್ಷಕರು, ಕಾರವಾರ ನಗರ ಪೊಲೀಸ್ ಠಾಣೆಯಲ್ಲಿ ಠಾಣಾ ಪ್ರಭಾರದಲ್ಲಿದ್ದ ಸಮಯದಲ್ಲಿ ಶ್ರೀ. ಜೆ.ಆರ್. ಮಿರಾಶಿ, ಕಾರವಾರ ಶಹರ ವನಪಾಲಕರು ಠಾಣೆಗೆ ಬಂದು ಅರಣ್ಯ ಗುನ್ನೆಗೆ ಸಂಬಂಧಿಸಿದಂತೆ ಒಂದು ಗೂಡ್ಸ್ ರಿಕ್ಷಾದಲ್ಲಿ ಕೋಡಿಬಾಗ ದಿಂದ ಚಿತ್ತಾಕುಲಾ ಕಡೆಗೆ ಚಿರಾವು ಕಟ್ಟಿಗೆ ಹೇರಿಕೊಂಡು ಹೋಗುತ್ತಿರುವ ಬಾತ್ಮಿ ಬಂದ ಮೇರೆಗೆ ನಾನು ಕೈ ಸನ್ನೆ ಮಾಡಿ ಸದರ ಆಟೋವನ್ನು ನಿಲ್ಲಿಸಿ ರಿಕ್ಷಾದಲ್ಲಿ ಏನಿದೆ ಎಂದು ಆಟೋ ಚಾಲಕನಿಗೆ ವಿಚಾರಿಸಿದಂತೆ ಚಿರಾವು ಕಟ್ಟಿಗೆ ಇರುವ ಬಗ್ಗೆ ತಿಳಿಸಿದನು. ಅದಕ್ಕೆ ಪಾಸ್/ಫರ್ಮಿಟ್ ಇದೆಯೇ ಎಂದು ಪ್ರಶ್ನಿಸಿದಾಗ ಅಷ್ಟರಲ್ಲಿ ಮತ್ತೆ ಮೂರು ವ್ಯಕ್ತಿಗಳಾದ (1) ಪ್ರದೀಪ ತಂದೆ ಸದಾನಂದ ಸಾಳಗಾಂವಕರ (2) ದಿಗಂಬರ ವಾಮನ ಹಳದನಕರ ಮತ್ತು (3) ದತ್ತಾರಾಮ ತಂದೆ ಸದಾನಂದ ಸಾಳಗಾವಂಕರ ಇವರು ಬಂದು ನನ್ನ ಮೇಲೆ ಹಲ್ಲೆ ಮಾಡಿರುವ ಬಗ್ಗೆ ಒಂದು ಲಿಖಿತ ಫಿರ್ಯಾದು ನೀಡಿದಂತೆ ಅದನ್ನು ನಾನು ಸ್ವೀಕರಿಸಿ ಫಿರ್ಯಾದಿನಲ್ಲಿ ನಮೂದಿಸಿದ ವಾಹನ ರಿಕ್ಷಾ ನೋಂದಣಿ ಸಂಖ್ಯೆ: ಕೆಎ–30/4809ರ ಶೋಧನೆಗಾಗಿ ಪಂಚರಾದ ಶ್ರೀ. ದಾಮೋದರ ಶಂಕರ ಗುನಗಿ ಸಾ: ಕಡವಾಡ ಮತ್ತು ಪ್ರಕಾಶ ಹೇಮು ಗುನಗಿ, ಸಾ: ಹಬ್ಬುವಾಡಾ, ಕಾರವಾರ ಇವರೊಡನೆ ಇಲಾಖಾ ವಾಹನದಲ್ಲಿ ಕಾರವಾರದಿಂದ ಸದಾಶಿವಗಡದ ಕಡಪಾಶಿಟ್ಟಾದ ಕಡೆಗೆ ಹೋಗಿ ಶೋಧನೆ ಮಾಡುತ್ತಿರುವ ಸಂದರ್ಭದಲ್ಲಿ ಕಡಪಾಶಿಟ್ಟಾದ ಕಚ್ಚಾ ರಸ್ತೆ ಮೇಲೆ ಒಂದು ಆಟೋ ರಿಕ್ಷಾ ನಿಂತಿದ್ದು, ಆಟೋ ರಿಕ್ಷಾದ ಹತ್ತಿರ 3 ಜನರು ಇದ್ದದ್ದು ಕಂಡು ನನ್ನ ಜೊತೆಯಲ್ಲಿದ್ದ ಫಿರ್ಯಾಧಿ ಶ್ರೀ. ಜೆ.ಆರ್. ಮಿರಾಶಿ ರವರು ತೋರಿಸಿ ನನ್ನ ಮೇಲೆ ಹಲ್ಲೆ ಮಾಡಿ, ಆಟೋ ರಿಕ್ಷಾವನ್ನು ಹೊಡೆದುಕೊಂಡು ಬಂದವರು ಇವರೇ ಇಂದು ಹೇಳಿದಂತೆ ಕೂಡಲೇ ನಾನು ಪಂಚರ ಸಮಕ್ಷಮ ಆರೋಪಿತರಿಗೆ ಹಿಡಿದು ಗುನ್ನೆಯ ಬಗ್ಗೆ ವಿಚಾರಿಸಿದಾಗ ಗುನ್ನೆ ಮಾಡಿದ ಬಗ್ಗೆ ಒಪ್ಪಿಕೊಂಡರು. ಸದರ ಆಟೋ ರಿಕ್ಷಾದಲ್ಲಿದ್ದ ಚಿರಾವು ಕಟ್ಟಿಗೆ ಬಗ್ಗೆ ಪಾಸ್ ಯಾ ಫರ್ಮಿಟ್ ಇದೆಯೇ ಅಂತ ಕೇಳಿದಾಗ ಇಲ್ಲವಾಗಿ ಹೇಳಿರುತ್ತಾರೆ. ಸದರ ರಿಕ್ಷಾದಲ್ಲಿದ್ದ ಚಿರಾವು ಕಟ್ಟಿಗೆ ಪರಿಶೀಲಿಸಿ ನೋಡಲಾಗಿ ಅವು ಸಾಗ69=0.264 ಘ.ಮೀ. ಮತ್ತು ಭರಣಗಿ ನಗಗಳು 23=0.267 ಘ.ಮೀ. ಇದ್ದವು. ಅವುಗಳಲ್ಲಿ ಸದರ ಎಲ್ಲಾ ತುಂಡುಗಳಿಗೆ ಎಂ.ನಿಶಾನೆ ಮಾರ್ಕ ಮಾಡಲಾಯಿತು. ಸದರ ಸಾಗ ಮತ್ತು ಭರಣಗಿ ತುಂಡುಗಳ ಪೈಕಿ ಒಂದೊಂದು ತುಂಡನ್ನು ಪರೀಕ್ಷೆಯ ಕುರಿತು ಪ್ರತ್ಯೇಕವಾಗಿ ತೆಗೆದಿರಿಸಲಾಯಿತು. ಹಾಗೂ ಸದರ ಚಿರಾವು ಕಟ್ಟಿಗೆ ಮತ್ತು ಅದನ್ನು ಸಾಗಾಟ ಮಾಡಲು ಉಪಯೋಗಿಸಿದ ಗೂಡ್ಸ ರಿಕ್ಷಾ ವಾಹನಸಂಖ್ಯೆ:ಕೆಎ–30/4809ನ್ನು ಕೂಡಾ ಜಪ್ತಪಡಿಸಿಕೊಂಡೆವು. ಸದರ ರಿಕ್ಷಾದ ಹಣೆಯ ಬೋರ್ಡಿನ ಮೇಲೆ ಪದ್ಮನಾಭ ಅಂತಾ ಇಂಗ್ಲೀಷಿನಿಂದ ಮುಂದಿನ ಶೋ ಗ್ಲಾಸ್ ಕೆಳಗಡೆ ಲಕ್ಷ್ಮಿಕೃಪಾ ಅಂತಾ ಇಂಗ್ಲೀಷಿನಿಂದ ಬರೆದದ್ದು ಇರುತ್ತದೆ. ಸದರ ಆರೋಪಿತರು ಮತ್ತು ರಿಕ್ಷಾ ಇದ್ದಿದೆಂಬ

ಜಾಗೆಯು ಕಡಪಾಶಿಟ್ಟಾದಲ್ಲಿಯ ಕಚ್ಚಾ ರಸ್ತೆ ಇದ್ದು ಇಲ್ಲಿ ರಸ್ತೆ ದಕ್ಷಿಣೋತ್ತರವಾಗಿ ಹಾದು ಹೋಗಿದ್ದು ಇದ್ದು ಈ ಸ್ಥಳದಿಂದ ಉತ್ತರಕ್ಕೆ 200 ಮೀಟರದಲ್ಲಿ ರಾಷ್ಟ್ರೀಯ ಹೆದ್ದಾರಿ 17ಕ್ಕೆ ಕೂಡಿದ್ದು ಇರುತ್ತದೆ. ಪೂರ್ವಕ್ಕೆ ಸದಾಶಿವಗಡ ಗುಡ್ಡ, ಗುಡ್ಡದ ಆಚೆ ರಾಷ್ಟ್ರೀಯ ಹೆದ್ದಾರಿ 17, ಪಶ್ಚಿಮಕ್ಕೆ ಖಿಲ್ಲಾ ಜಾಗೆ ಇದ್ದು, ದಕ್ಷಿಣಕ್ಕೆ ಸುಮಾರು 250 ಮೀಟರ ಅಂತರದಲ್ಲಿ ಕಾಳಿನದಿ ಹರಿದಿದ್ದು ಇರುತ್ತದೆ. ಸದರ ರಿಕ್ಷಾ ದಕ್ಷಿಣಕ್ಕೆ ಮುಖ ಮಾಡಿ ನಿಂತಿದ್ದು ಇರುತ್ತದೆ. ಈ ಕುರಿತು ಪಿ.ಎಸ್.ಐ ಕಾರವಾರ ಇವರು ಕಲಂ 353 IPC & 24, 62, 80, 71(ಂ), KF Act & 144 K.F. Rule ಪ್ರಕಾರ ಶಹರ ಪೊಲೀಸ್ ಠಾಣಾ ಗುನ್ನಾ ನಂ. 197/2003, ದಿನಾಂಕ:21-11-2003 ರಂತೆ ಗುನ್ನೆ ದಾಖಲಿಸಿಕೊಂಡಿದ್ದು ಇರುತ್ತದೆ. ಈ ಕುರಿತು ಪಂಚನಾಮೆಯನ್ನು ನಮ್ಮ ಠಾಣಾ ಸಿಬ್ಬಂದಿಗಳು ಪಂಚರ ಹೇಳಿಕೆಯಂತೆ ಸಾಯಂಕಾಲ 5.00 ಗಂಟೆಯಿಂದ 6.30 ಗಂಟೆಯವರೆಗೆ ಬರೆದು ಮುಗಿಸಿದ್ದು ಇರುತ್ತದೆ. ಪಂಚರ ಸಮಕ್ಷಮ ದಿನಾಂಕ: 21-11-2003 ರಂದು ಈ ನ್ಯಾಯಾಲಯಕ್ಕೆ ಜಪ್ತ ಗೂಡ್ಸ ರಿಕ್ಷಾ ವಾಹನ ಸಂಖ್ಯೆ: ಕೆಎ-30/4809 ಮತ್ತು ಸಾಗ 69=0.264 ಘ.ಮೀ. ಮತ್ತು ಭರಣಗಿ ನಗಗಳು 23=0.267 ಘ.ಮೀ. ಮುದ್ದೇ ಮ್ಹಾಲನ್ನು ಪಂಚನಾಮೆ, ಪ್ರಥಮ ಮಾಹಿತಿ ವರದಿಯೊಂದಿಗೆ ಒಪ್ಪಿಸಿರುತ್ತಾರೆ. ಸದರ ಅರಣ್ಯ ಗುನ್ನೆ ಪ್ರಕರಣವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71A ಪ್ರಕಾರ ಕ್ರಮ ಜರುಗಿಸಲು ಸೂಕ್ತವೆಂದು ಈ ನ್ಯಾಯಾಲಯಕ್ಕೆ ಕಂಡು ಬಂದಿದ್ದರಿಂದ ಈ ನ್ಯಾಯಾಲಯದ ಆದೇಶ ದಿನಾಂಕ: 05-12-2013 ರಂತೆ ಸದರ ಗುನ್ನೆಗೆ ಬಳಸಿದ ವಾಹನ ಹಾಗೂ ಮುದ್ಧೇ ಮ್ಹಾಲನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಗುನ್ನೆ ಪ್ರಕರಣದ ಆರೋಪಿತರು ಮತ್ತು ವಾಹನ ಮಾಲೀಕರಾದ ಶ್ರೀ. ದತ್ತಾರಾಮ ಸದಾನಂದ ಸಾಳಗಾಂವಕರ ಸಾ: ತಾಮ್ಸೇವಾಡಾ, ಕೋಡಿಬಾಗ ಇವರು ಈ ನ್ಯಾಯಾಲಯಕ್ಕೆ ಅವರ ಪರ ವಕೀಲರ ಮುಖಾಂತರ ದಿನಾಂಕ: 12-08-2005 ರಂದು ಅರ್ಜಿ ಸಲ್ಲಿಸಿ ಸದರ ವಾಹನವನ್ನು ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ಮನವಿ ಮಾಡಿಕೊಂಡಿದ್ದು ಇರುತ್ತದೆ.

3. ಈ ನ್ಯಾಯಾಲಯ ಆದೇಶ ದಿನಾಂಕ: 07-12-2007 ರ ಪ್ರಕಾರ ಜಪ್ತ ಗೂಡ್ಸ ರಿಕ್ಷಾ ವಾಹನ ಸಂಖ್ಯೆ:ಕೆಎ-30/4809 ನೇದನ್ನು ಅರ್ಜಿದಾರರಿಗೆ ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ಅವರ ಮನವಿಯನ್ನು ತಿರಸ್ಕರಿಸಿ ಆದೇಶ ಮಾಡಿದ್ದು ಇರುತ್ತದೆ.

4. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 30-10-2007, 13-11-2007, 12-09-2014, 17-10-2014, 07-11-2014, 14-11-2014, 28-11-2014, 19-12-2014, 30-01-2015 ಮತ್ತು 13-02-2015 ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ

5. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ ಹಾಗೂ ಎದುರುದಾರರ ಪರವಾಗಿ ಕಾನೂನು ಅಧಿಕಾರಿಗಳು (ಕಿ) ರವರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಕಾನೂನು ಅಧಿಕಾರಿಗಳು (ಕಿ) ಪಿಡಬ್ಲು-1 ರಿಂದ ಪಿಡಬ್ಲು-3 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲು-1 : ಶ್ರೀ. ಪ್ರಸಾದ ಕಲ್ಲಪ್ಪ ಗೋಖಲೆ, ಪೋಲೀಸ್ ಇನ್ಸ್‌ಫೆಕ್ಟರ್ ಡಿಸಿಐಬಿ, ಬಳ್ಳಾರಿ

ಪಿಡಬ್ಲು-2 : ಶ್ರೀ. ದಾಮೋದರ ಶಂಕರ ಗುನಗಿ, ಸಾ: ಕಡವಾಡ, ಹೊಂಡಗೇರಿ

ಪಿಡಬ್ಲು-3 : ಶ್ರೀ. ಜೋಗಿ ರಾಮಚಂದ್ರ ಮಿರಾಶಿ, ಸಾ: ಉಳಗಾ, ಕಾರವಾರ.

ನಿಶಾನೆ ಪಿ-1 ರಿಂದ ಪಿ-7 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ-1 : ಫಿರ್ಯಾದಿ

ನಿಶಾನೆ ಪಿ-2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-3: ಪಂಚನಾಮೆ

ನಿಶಾನೆ ಪಿ-4&5: ವಾಹನದ ಛಾಯಾ ಚಿತ್ರ

ನಿಶಾನೆ ಪಿ-6: ಪಿ.ಎಫ್. ಯಥಾ ನಕಲು

ನಿಶಾನೆ ಪಿ-7: ವಾಹನದ ಆರ್.ಸಿ. ಬುಕ್ಕನ ನಕಲು

ಮುದ್ದೆಮ್ಹಾಲು (1)- ಕೆಎ-30/4809 ಗೂಡ್ಸ್ ರಿಕ್ಷಾ.

6. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ 69=0.264 ಘ.ಮೀ. ಮತ್ತು ಭರಣಗಿ ನಗಗಳು 23=0.267 ಘ.ಮೀ. ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ ?

ಆ) ಈ ಮೇಲೆ ನಮೂದಿಸಿದ ಸಾಗ 69=0.264 ಘ.ಮೀ. ಮತ್ತು ಭರಣಗಿ ನಗಗಳು 23=0.267 ಘ.ಮೀ.ಕಳ್ಳ ಸಾಗಾಣಿಕೆ ಮಾಡುವಲ್ಲಿ ಗೂಡ್ಸ ರಿಕ್ಷಾ ವಾಹನ ಸಂಖ್ಯೆ: ಕೆಎ-30/4809 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ ?

ಇ) ಈ ಗುನ್ನೆಯನ್ನು ವಾಹನದ ಮಾಲೀಕ/ಅಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲು–1** ಶ್ರೀ. ಪ್ರಸಾದ ಕಲ್ಲಪ್ಪ ಗೋಖಲೆ ಇವರು ತಮ್ಮ ಸಾಕ್ಷ್ಯದಲ್ಲಿ ಈ ಪ್ರಕರಣ ದಾಖಲಾಗುವ ಕಾಲಕ್ಕೆ ನಾನು ಮಾರ್ಚ–2002 ರಿಂದ ಮೇ–2005 ರ ವರೆಗೆ ನಾನು ಕಾರವಾರ ನಗರ ಪೋಲೀಸ್ ಠಾಣೆಯ ಆರಕ್ಷಕ ಉಪನಿರೀಕ್ಷಕನಾಗಿ ಕೆಲಸ ನಿರ್ವಹಿಸಿದ್ದೇನೆ. ದಿನಾಂಕ: 21–11–2003 ರಂದು ಸಾಯಂಕಾಲ 4.00 ಗಂಟೆಗೆ ನಾನು ಠಾಣಾ ಪ್ರಭಾರದಲ್ಲಿದ್ದಾಗ ಶ್ರೀ. ಜೆ.ಆರ್. ಮಿರಾಶಿ, ಕಾರವಾರ ಶಹರ ವನಪಾಲಕರು ಠಾಣೆಗೆ ಹಾಜರಾಗಿ ಒಂದು ಲಿಖಿತ ಫಿರ್ಯಾದು ನೀಡಿದ್ದು ಅದನ್ನು ನಾನು ಸ್ವೀಕರಿಸಿ ಅದನ್ನು ನಮ್ಮ ಠಾಣಾ ಗುನ್ನಾ ನಂ. 197/2003 ಕಲಂ 353 ಐಪಿಸಿ ಮತ್ತು ಕರ್ನಾಟಕ ಅರಣ್ಯ ಕಾಯಿದೆ ಕಲಂ 24, 62, 80, 71ಎ ಹಾಗೂ 165 ಮತ್ತು ಕರ್ನಾಟಕ ಅರಣ್ಯ ನಿಯಮ 144 ರಡಿಯಲ್ಲಿ ಪ್ರಕರಣ ದಾಖಲಿಸಿಕೊಂಡು ಪ್ರ.ವಾ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಸಾಕ್ಷಿ ತಾನು ಸ್ವೀಕರಿಸಿದ ಫಿರ್ಯಾದನ್ನು ಹಾಗೂ ಪ್ರ.ವಾ ವರದಿಯ ಯಥಾ ನಕಲುಗಳನ್ನು ನೋಡಿ ಗುರುತಿಸಿದ್ದು ಅವುಗಳನ್ನು ಕ್ರಮವಾಗಿ ನಿ.ಪಿ–1 ಹಾಗೂ ನಿ.ಪಿ–2 ಎಂದು ಸಾಕ್ಷಿ ಸಹಿಯನ್ನು ನಿ.ಪಿ–1ಎ ಮತ್ತು ನಿ.ಪಿ–2ಎ ಎಂದು ಗುರುತಿಸಲಾಯಿತು. ಫಿರ್ಯಾದನ್ನು ಸ್ವೀಕರಿಸಿದಂತ ನಾನು ಆರೋಪಿತನಿಗಾಗಿ ಕಾರವಾರದ ಸದಾಶಿವಗಡದ ಕಡಪಾಶಿಟ್ಟದ ಕಡೆಗೆ ವಾಹನದಲ್ಲಿ ಹೋಗುತ್ತಿದ್ದಾಗ ಫಿರ್ಯಾದದಲ್ಲಿ ನಮೂದಿಸಿದ ವಾಹನ ರಿಕ್ಷ ನಂಬರ ಕೆಎ–30/4809ನೇದು ನಿಲ್ಲಿಸಿದ್ದು ಕಂಡು ಬಂದಿತು. ಆಟೋದ ಹತ್ತಿರ ನಿಂತಿರುವ 3 ವ್ಯಕ್ತಿಗಳನ್ನು ನಮ್ಮ ಸಂಗಡ ಇದ್ದ ಫಿರ್ಯಾದಿ ಶ್ರೀ. ಜೆ.ಆರ್. ಮಿರಾಶಿ ಇವರು ಸದರಿ ಆರೋಪಿತರು ಇವರೇ ಎಂದು ಗುರುತಿಸಿದರು. ಸದರಿ ಆಟೋ ರಿಕ್ಷಾವನ್ನು ಸಹ ಗುರುತಿಸಿದರು. ನಂತರ ಸ್ಥಳಕ್ಕೆ ಪಂಚರಾದ ದಾಮೋದರ ಗುನಗಿ ಹಾಗೂ ಪ್ರಕಾಶ ಗುನಗಿ ಇವರನ್ನು ಕರೆಯಿಸಿ ಆಟೋರಿಕ್ಷಾ ಪರಿಶೀಲಿಸಿದೆವು. ಅದರಲ್ಲಿದ್ದ ಕಟ್ಟಿಗೆ ಬಗ್ಗೆ ಆರೋಪಿತರನ್ನು ವಿಚಾರಿಸಲಾಗಿ ಅವರು ಸಾಗಾಟ ಮಾಡಲು ತಮ್ಮ ಬಳಿ ಯಾವುದೇ ಪಾಸ್ ಯಾ ಫರ್ಮಿಟ್ ಇಲ್ಲವೆಂದು ಹೇಳಿರುತ್ತಾರೆ. ಕಾರಣ, ಅಕ್ರಮವಾಗಿ ಕಟ್ಟಿಗೆಯನ್ನು ಸಾಗಿಸುತ್ತಿದ್ದ ಬಗ್ಗೆ ನಮಗೆ ಖಾತ್ರಿಯಾಗಿ ಪಂಚರ ಸಮಕ್ಷಮ ರಿಕ್ಷಾದಲ್ಲಿದ್ದ ಕಟ್ಟಿಗೆಯನ್ನು ಪರಿಶೀಲಿಸಲಾಗಿ ಅದರಲ್ಲಿ ಸಾಗವಾನಿ ಜಾತಿಯ ವಿವಿಧ ಆಕಾರದ 69 ತುಂಡುಗಳಿದ್ದು ಮತ್ತು ಭರಣಗಿ ತುಂಡುಗಳು 23 ಇದ್ದವು ಹೀಗೆ ಒಟ್ಟೂ 92 ಕಟ್ಟಿಗೆ ತುಂಡುಗಳು ಇದ್ದವು. ಇವುಗಳ ಒಟ್ಟೂ ಅಳತೆ ಅಂದಾಜು 0.531 ಘ.ಮೀ. ಆಗಿದ್ದು ಸದರಿ ತುಂಡುಗಳಿಗೆ ಎಂ. ನಿಶಾನೆಯ ಮಾರ್ಕನಿಂದ ಮಾರ್ಕ ಮಾಡಿರುತ್ತೇವೆ. ನಂತರ 92 ತುಂಡುಗಳಲ್ಲಿ ಒಂದು ಸಾಗ ಹಾಗೂ ಒಂದು ಭರಣಗಿ ಜಾತಿಯ ತುಂಡುಗಳನ್ನು ಪರೀಕ್ಷೆಗಾಗಿ ಪ್ರತ್ಯೇಕವಾಗಿ ತೆಗೆದಿರಸಲಾಯಿತು. ಸದರಿ ಕಟ್ಟಿಗೆ ತುಂಡು ಸಾಗಾಟ ಮಾಡುತ್ತಿದ್ದ ಆಟೋ ರಿಕ್ಷಾ ಸಂಖ್ಯೆ: ಕೆಎ–30/4809 ಹಾಗೂ 92 ಕಟ್ಟಿಗೆ ತುಂಡುಗಳನ್ನು ಪಂಚರ ಸಮಕ್ಷಮ ಪಂಚನಾಮೆ ಮಾಡಿ ಜಪ್ತಪಡಿಸಿಕೊಳ್ಳಲಾಯಿತು. ಪಂಚನಾಮೆಯನ್ನು ಸಾಯಂಕಾಲ 5.00 ಗಂಟೆಯಿಂದ 6.30 ಘಂಟೆಯ ವರೆಗೆ ನಮ್ಮ ಠಾಣಾ ಸಿಬ್ಬಂದಿಗಳು ಪಂಚರ ಹೇಳಿಕೆ ಮೇರೆಗೆ ಬರೆದಿರುತ್ತಾರೆ. ಪಂಚನಾಮೆ ಹಾಗೂ ತನ್ನ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ನಿಪಿ–3 ಸಾಕ್ಷಿ ಸಹಿಯನ್ನು ನಿ.ಪಿ–3ಎ ಎಂದು ಗುರುತಿಸಲಾಯಿತು. ಸ್ಥಳದಲ್ಲಿ 3 ಜನ ಆರೋಪಿತರಾದ ಪ್ರದೀಪ ಸಾಳಗಾಂವಕರ, ದಿಗಂಬರ ಹಳದನಕರ ಹಾಗೂ ದತ್ತಾರಾಮ ಸಾಳಗಾಂವಕರ ಇವರನ್ನು ವಶಕ್ಕೆ ಪಡಕೊಂಡು ಜಪ್ತಪಡಿಸಿಕೊಂಡ ವಾಹನ ಕಟ್ಟಿಗೆ ತುಂಡುಗಳು ಆರೋಪಿತರೊಂದಿಗೆ ಠಾಣೆಗೆ ಹಿಂದುರಿಗಿ ಜಪ್ತಪಡಿಸಿದ ವಾಹನದ ಬಗ್ಗೆ ಹಾಗೂ ಕಟ್ಟಿಗೆ ತುಂಡುಗಳ ಬಗ್ಗೆ ಮಾನ್ಯ ಜೆ.ಎಂ.ಎಫ್.ಸಿ ನ್ಯಾಯಲಯಕ್ಕೆ ಸಲ್ಲಿಸಿರುತ್ತೇನೆ. ಜಪ್ತಪಡಿಸಿಕೊಂಡ ವಾಹನದ ಛಾಯಾ ಚಿತ್ರಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–4 ಮತ್ತು 5 ಎಂದು ಗುರುತಿಸಲಾಯಿತು. ಹಾಗೂ ನ್ಯಾಯಾಲಯದ ವಾಹನವನ್ನು ನೋಡಿ ಸಾಕ್ಷಿ ಗುರುತಿಸಿದ್ದು ಅದನ್ನು ಮು.ಮಾ–1 ಎಂದು ಗುರುತಿಸಲಾಯಿತು. ಸಾಕ್ಷಿ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ ಪಿ.ಎಫ್ ಯಥಾ ನಕಲನ್ನು ಗುರುತಿಸಿದ್ದು ಅದನ್ನು ನಿ.ಪಿ–6 ಸಾಕ್ಷಿ ಸಹಿಯನ್ನು ನಿ.ಪಿ–6ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿಕೊಂಡ ವಾಹನವು ಆರೋಪಿತನಾದ ದತ್ತಾರಾಮ ಸದಾನಂದ ಸಾಳಗಾಂವಕರ ಇತನಿಗೆ ಸೇರಿದ್ದು ಎಂದು ನನ್ನ ತನಿಖಾ ಕಾಲಕ್ಕೆ ತಿಳಿದು ಬಂದಿತು. ಈ ಬಗ್ಗೆ ವಾಹನದ ಆರ್.ಸಿ. ಬುಕ್ಕಿನ ನಕಲನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–7 ಎಂದು ಗುರುತಿಸಲಾಯಿತು. ನಂತರ ಈ ಪ್ರಕರಣದ ಬಗ್ಗೆ ತನಿಖೆ ಕೈಕೊಂಡು ನಾನು ಕಾರವಾರ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ನಂತರ ನಿ.ಪಿ–6ರಲ್ಲಿ ನಮೂದಿಸಿದಂತಹ ವಾಹನ ಸಂಖ್ಯೆ: ಕೆಎ–30/4809 ಮತ್ತು ಕಟ್ಟಿಗೆ ತುಂಡುಗಳನ್ನು ಮಾನ್ಯ ನ್ಯಾಯಾಲಯವು ಅರಣ್ಯ ಇಲಾಖೆಗೆ ಕಾನೂನಿನ ಪ್ರಕಾರ ಮುಂದಿನ ಕ್ರಮಕ್ಕಾಗಿ ಹಸ್ತಾಂತರಿಸಿದ್ದು ಇರುತ್ತದೆ. ಕಾರಣ, ಸದರಿ ವಾಹನವನ್ನು ಅರಣ್ಯ ಕಳ್ಳ ಸಾಗಾಣಿಕೆಗೆ ಅಕ್ರಮವಾಗಿ ಉಪಯೋಗಿಸಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿಕೊಳ್ಳುತ್ತೇನೆ ಎಂದು ಹೇಳಿರುತ್ತಾರೆ.

**ಪಾಟೀ ಸವಾಲು:** ವಾಹನದ ಮಾಲೀಕರಿಗೆ ಈಗಾಗಲೇ ನೋಟಿಸನ್ನು ಕಳುಹಿಸಲಾಗಿದ್ದು, ಅದನ್ನು ಅವರು ಸ್ವೀಕರಿಸಿದ್ದು ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿದ್ದು ಇರುವದಿಲ್ಲ. ಕಾರಣ ವಾಹನದ ಮಾಲೀಕರ ಪರ ಯಾವುದೇ ಪಾಟೀ ಸವಾಲು ಇಲ್ಲಾವೆಂದು ಪರಿಗಣಿಸಲಾಯಿತು.

**ಪಿಡಬ್ಲು–2** ಶ್ರೀ. ದಾಮೋದರ ಶಂಕರ ಗುನಗಿ ಇವರು ತಮ್ಮ ಸಾಕ್ಷ್ಯದಲ್ಲಿ ಪೊಲೀಸರು ನನ್ನ ಸಮಕ್ಷಮ ಯಾವುದೇ ಪಂಚನಾಮೆ ಮಾಡಿಲ್ಲ. ಆದರೆ ವಲಯ ಅರಣ್ಯಾಧಿಕಾರಿಗಳ ಕಚೇರಿ ಕಾರವಾರದಲ್ಲಿ ಬಂದು ಪಂಚನಾಮೆಯಲ್ಲಿ ನನ್ನ ಸಹಿಯನ್ನು ಪಡೆದುಕೊಂಡಿದ್ದಾರೆ. ಪಂಚನಾಮೆ ಹಾಗೂ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ಈಗಾಗಲೇ ನಿ.ಪಿ–3 ಎಂದು ಗುರುತಿಸಿದ್ದು ಸಾಕ್ಷಿ ಸಹಿಯನ್ನು ನಿ.ಪಿ3ಬಿ ಎಂದು ಗುರುತಿಸಲಾಯಿತು. ನನ್ನ ಸಮಕ್ಷಮ ಪೊಲೀಸರು ಯಾವುದೇ ಗೂಡ್ಸ ರಿಕ್ಷಾವನ್ನು ಜಪ್ತಪಡಿಸಿಕೊಂಡಿರುವದಿಲ್ಲ. ನಿ.ಪಿ–4 ಮತ್ತು 5 ರಲ್ಲಿ ಇರುವ ವಾಹನವನ್ನು ನೋಡಿ ಗುರುತಿಸಲು ಆಗುವದಿಲ್ಲ. ನಿ.ಪಿ–3 ರ ವಿವರಗಳು ನನಗೆ ಗೊತ್ತಿಲ್ಲ ಎಂದು ಹೇಳಿರುತ್ತಾರೆ.

ಸಾಕ್ಷಿದಾರರು ಪ್ರತಿಕೂಲ ಸಾಕ್ಷಿ ನುಡಿದಿದ್ದರಿಂದ ಮಾನ್ಯ ಎಡಿಪಿಯವರು ಪಾಟೀ ಸವಾಲು ಮಾಡಲು ಕೋರಿದ್ದು ಅವರಿಗೆ ಪಾಟೀ ಸವಾಲು ಮಾಡಲು ಅನುಮತಿ ನೀಡಲಾಯಿತು.

**ಪಾಟೀ ಸವಾಲು ಎಡಿಪಿಯವರಿಂದ :**

ದಿನಾಂಕ: 21–11–2003 ರಂದು ಪ್ರ.ಸ–1 ರವರು ನನ್ನನ್ನು ಹಾಗೂ ಪ್ರಕಾಶ ಹೇಮು ಗುನಗಿಯವರು ಸದಾಶಿವಗಡದ ಕಡಪಾಶಿಟ್ಟಾದಲ್ಲಿ ಕರೆದುಕೊಂಡು ಹೋಗಿ ಅಲ್ಲಿ ಶ್ರೀ. ಮಿರಾಶಿಯವರು ಗುರುತಿಸಿದ ಆಟೋ ರಿಕ್ಷಾ ಸಂಖ್ಯೆ: ಕೆಎ–30/4809ನೇದನ್ನು ಪರಿಶೀಲಿಸಿದರು ಎಂದರೆ ಸರಿ. ಹಾಗೂ ಅದರಲ್ಲಿದ್ದ 69 ಸಾಗವಾನಿ ನಗಗಳನ್ನು ಹಾಗೂ 23 ಭರಣಗಿ ನಗಗಳನ್ನು ಜಪ್ತಪಡಿಸಿಕೊಂಡರು ಮತ್ತು ಸದರಿ ರಿಕ್ಷಾವನ್ನು ಸಹ ನಿ.ಪಿ–3 ಪಂಚನಾಮೆಯಡಿ ಜಪ್ತಪಡಿಸಿಕೊಂಡರು ಎಂದರೆ ಸರಿ. ಆ ಕಾಲಕ್ಕೆ ಅಲ್ಲಿ ಆಟೋದ ಹತ್ತಿರ 3 ಜನರು ಇದ್ದರು ಎಂದರೆ ಸರಿ. ನಿ.ಪಿ–3 ಕ್ಕೆ ನಾನು ಸ್ಥಳದಲ್ಲಿಯೇ ಸಹಿ ಹಾಕಿದ್ದೇನೆ ಎಂದರೆ ಸರಿ. ಆದರೆ ಜಪ್ತಿಪಡಿಸಿಕೊಂಡಂತಹ ಆಟೋ ರಿಕ್ಷಾ ನಿ.ಪಿ–4 ಮತ್ತು 5ರಲ್ಲಿ ಇರುವ ಆಟೋ ರಿಕ್ಷಾ ಎಂದರೆ ಸರಿ. ನನ್ನ ಸಂಗಡ ಪ್ರಕಾಶ ತಂದೆ ಹೇಮು ಗುನಗಿ ಇವರು ಸಹ ನಿ.ಪಿ–3 ಕ್ಕೆ ಸಹಿ ಹಾಕಿದ್ದಾರೆ ಎಂದರೆ ಸರಿ ಎಂದು ಹೇಳಿರುತ್ತಾರೆ.

**ಪಿ.ಡಬ್ಲು–3** ಶ್ರೀ. ಜೋಗಿ ರಾಮಚಂದ್ರ ಮಿರಾಶಿ ಇವರು ತಮ್ಮ ಸಾಕ್ಷ್ಯದಲ್ಲಿ ಈ ಪ್ರಕರಣ ದಾಖಲಾಗುವ ಕಾಲಕ್ಕೆ ನಾನು 2000 ರಿಂದ 2005 ರ ವರೆಗೆ ಕಾರವಾರ ಶಹರ ವನಪಾಲಕನಾಗಿ ಕೆಲಸ ಮಾಡಿದ್ದೇನೆ. ದಿನಾಂಕ: 21–11–2003ರಂದು ನಾನು ಕರ್ತವ್ಯದಲ್ಲಿದ್ದಾಗ ನನಗೆ ಒಂದು ಗೂಡ್ಸ ಅಟೋ ರಿಕ್ಷಾದಲ್ಲಿ ಕೋಡಿಬಾಗ ದಿಂದ ಚಿತ್ತಾಕುಲಾ ಕಡೆಗೆ ಚಿರಾವು ಕಟ್ಟಿಗೆ ಹೇರಿಕೊಂಡು ಹೋಗುತ್ತಿದ್ದಾರೆಂದು ಬಾತ್ಮಿ ಬಂದಿತು. ನಂತರ ನಾನು ಕೂಡಲೇ ಖಾಪ್ರಿ ದೇವಸ್ಥಾನದ ಎದುರುಗಡೆ ನಿಂತು ಕಾಯುತ್ತಿದ್ದಾಗ ಬೆಳಿಗ್ಗೆ 10.30 ಗಂಟೆ ಸುಮಾರಿಗೆ ಕೋಡಿಬಾಗ ಕಡೆಗೆ ಒಂದು ಗೂಡ್ಸ ಆಟೋ ರಿಕ್ಷಾ ಬಂದಿತು ನಾನು ಕೈಸನ್ನೆ ಮಾಡಿ ಸದರಿ ಆಟೋವನ್ನು ನಿಲ್ಲಿಸಿದ್ದೇನೆ. ರಿಕ್ಷಾ ಚಾಲಕನಿಗೆ ರಿಕ್ಷಾದಲ್ಲಿ ಏನಿದೆ ಎಂದು ಕೇಳಿದಾಗಿ ಚಿರಾವು ಕಟ್ಟಿಗೆ ಇರುವ ಬಗ್ಗೆ ತಿಳಿಸಿದರು ನಾನು ಆತನ ಬಳಿ ಪಾಸ್/ಫರ್ಮಿಟ ಕೇಳಿದಾಗ ಆತ ಇಲ್ಲಾ ಎಂದು ಹೇಳಿರುತ್ತಾನೆ. ಅಷ್ಟರಲ್ಲಿ ಮತ್ತೆ ಇಬ್ಬರು ಬಂದು ನಿನಗೆ ಏಕೆ ಪಾಸು ತೋರಿಸಬೇಕೆಂದು ಕೇಳಿ ಮೂವರು ಸೇರಿ ನನ್ನ ಮೇಲೆ ಹಲ್ಲೆ ಮಾಡಿರುತ್ತಾರೆ. ಮತ್ತು ನನ್ನ ಶರ್ಟು ಎಳೆದು ಹರಿದುಹಾಕಿರುತ್ತಾರೆ. ನನಗೆ ದೂಡಿಹಾಕಿ ರಿಕ್ಷಾವನ್ನು ಚಿತ್ತಾಕುಲಾ ಕಡೆಗೆ ತೆಗೆದುಕೊಂಡು ಹೋಗಿರುತ್ತಾರ. ಸದರಿ ರಿಕ್ಷಾ ನಂಬರ ನೋಡಲಾಗಿ ಕೆಎ–30/4809 ಆಗಿರುತ್ತದೆ. ನಂತರ ಕೂಡಲೇ ನಾನು ಮೇಲಾಧಿಕಾರಿಗಳಿಗೆ ವಿಷಯವನ್ನು ತಿಳಿಸಿ ಕಾರವಾರ ನಗರ ಪೊಲೀಸ್ ಠಾಣೆಗೆ ಬಂದು ಆರೋಪಿತರು ನನ್ನ ಕರ್ತವ್ಯಕ್ಕೆ ಅಡ್ಡಿ ಮಾಡಿದ ಬಗ್ಗೆ ದೂರನ್ನು ದಾಖಲಿಸುತ್ತೇನೆ. ಸಾಕ್ಷಿ ಸದರಿ ದೂರನ್ನು ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–1 ಆಗಿದ್ದು ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ನಾನು ದೂರು ನೀಡಿದ ನಂತರ ಪ್ರಸ–1 ರವರು ನನ್ನನ್ನು ಹಾಗೂ ಸಿಬ್ಬಂದಿಗಳನ್ನು ಕರೆದುಕೊಂಡು ಗೂಡ್ಸ್ ರಿಕ್ಷಾ ಹಾಗೂ ಆರೋಪಿತರನ್ನು ಹುಡುಕುತ್ತಾ ಅವರ ಇಲಾಖಾ ಜೀಪಿನ ಮೇಲೆ ಹೋಗುತ್ತಿದ್ದಾಗ ಕಡಪಾಶಿಟ್ಟಾದಲ್ಲಿ ಕಚ್ಚಾ ರಸ್ತೆಯ ಮೇಲೆ ಆಟೋ ನಿಂತಿದ್ದು ನಾನು ನೋಡಿರುತ್ತೇನೆ. ನಾನು ಅದನ್ನು ಗುರುತು ಹಿಡಿದು ಪ್ರ.ಸ–1 ರವರಿಗೆ ಹೇಳಿರುತ್ತೇನೆ. ಕೂಡಲೇ ಪ್ರ.ಸ–1 ರವರು ಪಂಚರಾದ ಪ್ರಸ–2 ಹಾಗೂ ಪ್ರಕಾಶ ಗುನಗಿ ಯವರಿಗೆ ಸ್ಥಳದಲ್ಲಿ ಕರೆಯಿಸಿ ರಿಕ್ಷಾವನ್ನು ಪರಿಶೀಲಿಸುತ್ತಾರೆ. ರಿಕ್ಷಾದಲ್ಲಿ ಒಟ್ಟೂ 69 ಸಾಗವಾನಿ ತುಂಡುಗಳು ಹಾಗೂ 23 ಭರಣಗಿ ತುಂಡುಗಳು ಇದ್ದವು. ಪ್ರತಿ ತುಂಡುಗಳ ಮೇಲೆ ಎಂ. ನಿಶಾನೆಯ ಮಾರ್ಕ ಮಾಡಿಕೊಂಡು ಸ್ಯಾಂಪಲ್‌ಗಾಗಿ ಸಾಗವಾನಿ ಹಾಗೂ ಭರಣಗಿ ಜಾತಿಯ ಒಂದು ತುಂಡನ್ನು ತೆಗೆದಿರಿಸಲಾಯಿತು. ಸ್ಥಳದಲ್ಲಿ ಮೂರು ಜನ ಆರೋಪಿತರು ಹಾಜರಿದ್ದು ಸದ್ರಿ ಕಟ್ಟಿಗೆಗಳ ಬಗ್ಗೆ ಯಾವುದೇ ಪಾಸ್/ಫರ್ಮಿಟ್ ಇಲ್ಲವೆಂದು ಹೇಳಿರುತ್ತಾರೆ. ಕಾರಣ, ಸ್ಥಳದಲ್ಲಿ ಪ್ರಸ–1 ರವರು ನಿ.ಪಿ–3 ರಂತೆ ಪಂಚನಾಮೆ ಮಾಡಿ ಸದರಿ ಮರದ ತುಂಡುಗಳನ್ನು ಹಾಗೂ ರಿಕ್ಷಾ ನಂಬರ ಕೆಎ–30/4809ನೇದನ್ನು ಜಪ್ತಪಡಿಸಿಕೊಂಡಿರುತ್ತಾರೆ. ಸಾಕ್ಷಿ ಪಂಚನಾಮೆ ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–3 ಎಂದು ನಿಶಾನೆಗೊಳಿಸಲಾಗಿದೆ. ಜಪ್ತಪಡಿಸಿದ ರಿಕ್ಷಾದ ಫೋಟೊವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–4 ಮತ್ತು 5 ಎಂದು ಗುರುತಿಸಲಾಗಿದೆ. ಈ ರಿಕ್ಷಾವು ಆದಿನ ಹಾಜರಿದ್ದ ಮೂರನೇ ಆರೋಪಿ ದತ್ತಾರಾಮ ಸದಾನಂದ ಸಾಳಗಾಂವಕರ ಇತನಿಗೆ ಸೇರಿದ್ದು ಎಂದು ನನಗೆ ನಂತರದಲ್ಲಿ ಗೊತ್ತಾಯಿತು. ಸದರಿ ಮೂರು ಜನ ಆರೋಪಿತರಾದ ಪ್ರದೀಪ, ದಿಗಂಬರ ಹಾಗೂ ದತ್ತಾರಾಮ ರವರು ನನ್ನ ಸರ್ಕಾರಿ ಕರ್ತವ್ಯಕ್ಕೆ ಅಡ್ಡಿಪಡಿಸಿದ್ದು ಇರುತ್ತದೆ. ಹಾಗೂ ನನ್ನ ಮೇಲೆ ಹಲ್ಲೆ ಮಾಡಿದ್ದು ಇರುತ್ತದೆ. ಹಾಗೂ ಗೂಡ್ಸ ರಿಕ್ಷಾ ಸಂಖ್ಯೆ: ಕೆಎ–30/4809ನೇದನ್ನು ಸಾಗ ಹಾಗೂ ಭರಣಗಿ ನಗಗಳನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗ ಮಾಡಿರುತ್ತಾರೆ. ಕಾರಣ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ ಎಂದು ಹೇಳಿರುತ್ತಾರೆ.

**ಪಾಟೀ ಸವಾಲು:**

ಅರ್ಜಿದಾರರು ಅವರ ಪರ ವಕೀಲರನ್ನು ಕರೆಯಿಸಲಾಗಿ ಹಾಜರು ಇರುವದಿಲ್ಲ. ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

**ಅಂಶ ನಂ. (ಅ):**

ದಿನಾಂಕ: 21–11–2013 ರಂದು ಸಾಯಂಕಾಲ 4.00 ಘಂಟೆಯ ಸಮಯಕ್ಕೆ ಶ್ರೀ. ಪ್ರಸಾದ ಗೋಖಲೆ, ಆರಕ್ಷಕ ಉಪನಿರೀಕ್ಷಕರು, ಕಾರವಾರ ನಗರ ಪೊಲೀಸ್ ಠಾಣೆಯಲ್ಲಿ ಠಾಣಾ ಪ್ರಭಾರದಲ್ಲಿದ್ದ ಸಮಯದಲ್ಲಿ ಶ್ರೀ. ಜೆ.ಆರ್. ಮಿರಾಶಿ, ಕಾರವಾರ ಶಹರ ವನಪಾಲಕರು ಠಾಣೆಗೆ ಬಂದು ಅರಣ್ಯ ಗುನ್ನೆಗೆ ಸಂಬಂಧಿಸಿದಂತೆ ಒಂದು ಗೂಡ್ಸ್ ರಿಕ್ಷಾದಲ್ಲಿ ಕೋಡಿಬಾಗ ದಿಂದ ಚಿತ್ತಾಕುಲಾ ಕಡೆಗೆ ಚಿರಾವು ಕಟ್ಟಿಗೆ ಹೇರಿಕೊಂಡು ಹೋಗುತ್ತಿರುವ ಬಾತ್ಮಿ ಬಂದ ಮೇರೆಗೆ ನಾನು ಕೈ ಸನ್ನೆ ಮಾಡಿ ಸದರ ಆಟೋವನ್ನು ನಿಲ್ಲಿಸಿ ರಿಕ್ಷಾದಲ್ಲಿ ಏನಿದೆ ಎಂದು ಆಟೋ ಚಾಲಕನಿಗೆ ವಿಚಾರಿಸಿದಂತೆ ಚಿರಾವು ಕಟ್ಟಿಗೆ ಇರುವ ಬಗ್ಗೆ ತಿಳಿಸಿದನು. ಅದಕ್ಕೆ ಪಾಸ್/ಫರ್ಮಿಟ್ ಇದೆಯೇ ಎಂದು ಪ್ರಶ್ನಿಸಿದಾಗ ಅಷ್ಟರಲ್ಲಿ ಮತ್ತಿ ಮೂರು

ವ್ಯಕ್ತಿಗಳಾದ (1) ಪ್ರದೀಪ ತಂದೆ ಸದಾನಂದ ಸಾಳಗಾಂವಕರ (2) ದಿಗಂಬರ ವಾಮನ ಹಳದನಕರ ಮತ್ತು (3) ದತ್ತಾರಾಮ ತಂದೆ ಸದಾನಂದ ಸಾಳಗಾವಂಕರ ಇವರು ಬಂದು ನನ್ನ ಮೇಲೆ ಹಲ್ಲೆ ಮಾಡಿರುವ ಬಗ್ಗೆ ಒಂದು ಲಿಖಿತ ಫಿರ್ಯಾದು ನೀಡಿದಂತೆ ಅದನ್ನು ನಾನು ಸ್ವೀಕರಿಸಿ ಫಿರ್ಯಾದಿನಲ್ಲಿ ನಮೂದಿಸಿದ ವಾಹನ ರಿಕ್ಷಾ ನೋಂದಣಿ ಸಂಖ್ಯೆ: ಕೆಎ–30/4809ರ ಶೋಧನೆಗಾಗಿ ಪಂಚರಾದ ಶ್ರೀ. ದಾಮೋದರ ಶಂಕರ ಗುನಗಿ ಸಾ: ಕಡವಾಡ ಮತ್ತು ಪ್ರಕಾಶ ಹೇಮು ಗುನಗಿ, ಸಾ: ಹಬ್ಬುವಾಡಾ, ಕಾರವಾರ ಇವರೊಡನೆ ಇಲಾಖಾ ವಾಹನದಲ್ಲಿ ಕಾರವಾರದಿಂದ ಸದಾಶಿವಗಡದ ಕಡಪಾಶಿಟ್ಟಾದ ಕಡೆಗೆ ಹೋಗಿ ಶೋಧನೆ ಮಾಡುತ್ತಿರುವ ಸಂದರ್ಭದಲ್ಲಿ ಕಡಪಾಶಿಟ್ಟಾದ ಕಚ್ಚಾ ರಸ್ತೆ ಮೇಲೆ ಒಂದು ಆಟೋ ರಿಕ್ಷಾ ನಿಂತಿದ್ದು, ಆಟೋ ರಿಕ್ಷಾದ ಹತ್ತಿರ 3 ಜನರು ಇದ್ದದ್ದು ಕಂಡು ನನ್ನ ಜೊತೆಯಲ್ಲಿದ್ದ ಫಿರ್ಯಾಧಿ ಶ್ರೀ. ಜೆ.ಆರ್. ಮಿರಾಶಿ ರವರು ತೋರಿಸಿ ನನ್ನ ಮೇಲೆ ಹಲ್ಲೆ ಮಾಡಿ, ಆಟೋ ರಿಕ್ಷಾವನ್ನು ಹೊಡೆದುಕೊಂಡು ಬಂದವರು ಇವರೇ ಎಂದು ಹೇಳಿದಂತೆ ಕೂಡಲೇ ನಾನು ಪಂಚರ ಸಮಕ್ಷಮ ಆರೋಪಿತರಿಗೆ ಹಿಡಿದು ಗುನ್ನೆಯ ಬಗ್ಗೆ ವಿಚಾರಿಸಿದಾಗ ಗುನ್ನೆ ಮಾಡಿದ ಬಗ್ಗೆ ಒಪ್ಪಿಕೊಂಡರು. ಸದರ ಆಟೋ ರಿಕ್ಷಾದಲ್ಲಿದ್ದ ಚಿರಾವು ಕಟ್ಟಿಗೆ ಬಗ್ಗೆ ಪಾಸ್ ಯಾ ಫರ್ಮಿಟ್ ಇದೆಯೇ ಅಂತ ಕೇಳಿದಾಗ ಇಲ್ಲವಾಗಿ ಹೇಳಿರುತ್ತಾರೆ. ಸದರ ರಿಕ್ಷಾದಲ್ಲಿದ್ದ ಚಿರಾವು ಕಟ್ಟಿಗೆ ಪರಿಶೀಲಿಸಿ ನೋಡಲಾಗಿ ಅವು ಸಾಗ69=0.264 ಘ.ಮೀ. ಮತ್ತು ಭರಣಗಿ ನಗಗಳು 23=0.267 ಘ.ಮೀ. ಇದ್ದವು. ಅವುಗಳಲ್ಲಿ ಸದರ ಎಲ್ಲಾ ತುಂಡುಗಳಿಗೆ ಎಂ.ನಿಶಾನೆ ಮಾರ್ಕ ಮಾಡಲಾಯಿತು. ಸದರ ಸಾಗ ಮತ್ತು ಭರಣಗಿ ತುಂಡುಗಳ ಪೈಕಿ ಒಂದೊಂದು ತುಂಡನ್ನು ಪರೀಕ್ಷೆಯ ಕುರಿತು ಪ್ರತ್ಯೇಕವಾಗಿ ತೆಗೆದಿರಿಸಲಾಯಿತು. ಹಾಗೂ ಸದರ ಚಿರಾವು ಕಟ್ಟಿಗೆ ಮತ್ತು ಅದನ್ನು ಸಾಗಾಟ ಮಾಡಲು ಉಪಯೋಗಿಸಿದ ಗೂಡ್ಸ ರಿಕ್ಷಾ ವಾಹನಸಂಖ್ಯೆ:ಕೆಎ–30/4809ನ್ನು ಕೂಡಾ ಜಫ್ತಪಡಿಸಿಕೊಂಡೆವು. ಈ ಕುರಿತು ಪಿ.ಎಸ್.ಐ ಕಾರವಾರ ಇವರು ಕಲಂ 353 IPC & 24, 62, 80, 71(A), KF Act & 144 K.F. Rule ಪ್ರಕಾರ ಶಹರ ಪೊಲೀಸ್ ಠಾಣಾ ಗುನ್ನಾ ನಂ. 197/2003, ದಿನಾಂಕ:21–11–2003 ರಂತೆ ಗುನ್ನೆ ದಾಖಲಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಅರಣ್ಯ ಗುನ್ನೆಯಲ್ಲಿ ಬಳಸಿದ ಬಗ್ಗೆ (ನಿ.ಪಿ– 1ರಿಂದ ನಿ.ಪಿ–7) ಹಾಜರುಪಡಿಸಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ರಿಂದ ಪಿಡಬ್ಲು–3** ಇವರು ತಮ್ಮ ಸಾಕ್ಷದಲ್ಲಿ ನಿ.ಪಿ–3ಕ್ಕೆ ಓದಿ ಸಹಿ ಹಾಕಿದ ಬಗ್ಗೆ ತಮ್ಮ ಪಾಟೀ ಸವಾಲಿನ ಉತ್ತರದಲ್ಲಿ ಹೇಳಿದ್ದು ಇದರಿಂದ ಗೂಡ್ಸ್ ರಿಕ್ಷಾ ವಾಹನದಲ್ಲಿ 69 ಸಾಗವಾನಿ ಹಾಗೂ 23 ಭರಣಗಿ ತುಂಡುಗಳು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ದಿನಾಂಕ: 21–11–2013 ರಂದು ಕಾರವಾರ ನಗರ ಪೊಲೀಸ್ ಠಾಣೆಯ ಆರಕ್ಷಕ ಉಪನಿರೀಕ್ಷಕ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 197/2003 ಮತ್ತು ಪಂಚನಾಮೆಯನ್ನು **(ನಿ.ಪಿ–2 ಮತ್ತು ನಿ.ಪಿ–3)** ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರ/ವಾಹನ ಮಾಲೀಕ ಸ್ವತ: ತನ್ನ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA–30/4809 ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಫರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಸಾಗ ಮತ್ತು ಭರಣಗಿ ಜಾತಿಯ ತುಂಡುಗಳನ್ನು ಕಳ್ಳಸಾಗಾಣಿಕೆಯಿಂದ ಸಾಗಿಸುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA–30/4809 ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಫರ್ಮಿಟ್ ಇಲ್ಲದೇ ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರ್ ಇಲ್ಲದ ಸಾಗ ಮತ್ತು ಭರಣಗಿ ತುಂಡುಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಕಾನೂನು ಅಧಿಕಾರಿಗಳು (ಕಿ) ರವರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಕಾನೂನು ಅಧಿಕಾರಿಗಳು (ಕಿ) ರವರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಕಾನೂನು ಅಧಿಕಾರಿಗಳು (ಕಿ) ರವರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಗೂಡ್ಸ್ ರಿಕ್ಷಾ ವಾಹನಸಂಖ್ಯೆ: KA–30/4809 ಇದು ದಿನಾಂಕ: 21–11–2003 ರಂದು ಪ್ರಥಮ ಮಾಹಿತಿ ಸಂಖ್ಯೆ: 197/2003, ದಿನಾಂಕ: 21–11–2003 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ 60 ತುಂಡುಗಳು ಹಾಗೂ ಭರಣಗಿ 23 ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ :

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಗೂಡ್ಸ ರಿಕ್ಷಾ ವಾಹನಸಂಖ್ಯೆ: KA–30/4809 ಮತ್ತು ಅದರಲ್ಲಿದ್ದ ಸಾಗವಾನಿ ತುಂಡುಗಳು 69=0.264 ಘ.ಮೀ. ಮತ್ತು ಭರಣಗಿ ತುಂಡುಗಳು 23=0.267 ಘ.ಮೀ. ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

1) ನೋಂದಣಿ ಸಂಖ್ಯೆ : KA-30/4809
2) ಇಂಜಿನ್ ನಂಬರ : S3 CL033292
3) ಚಾಸಿ ನಂಬರ : 543-7032152CL
4) ವಾಹನದ ಮಾದರಿ : ಗೂಡ್ಸ್ ರಿಕ್ಷಾ (ಮೂರು ಗಾಲಿ)

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:24–07–2015 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

**CERTIFIED COPY**

**P.R. 770**

**SC-1**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU.

**Present :** RITVIK PANDEY, IAS,
Commissioner of Commercial Taxes.
(Karnataka) Bengaluru.

**Sub :** KVAT Act, 2003 - Clarification U/s 59(4) regarding the rate of tax applicable on "Epoxy Resin DER 663U-E", "Epoxy Resin DER 671 X75", "Specflex NF 749 Polyol", "Specflex FD 402", and "Walocel CRT 50000 PA-07" - reg

**Ref :** 1) Clarification order No. CLR/CR-102/2013-14 dt. 25.6.2014
2) Clarification order No. CLR/CR-103/2013-14 dt. 25.6.2014
3) Application dt. 23.10.2013 of M/s Dow Chemical International Pvt. Limited, Bengaluru-562 123.
4) Order of the Hon'ble High Court of Karnataka dt.11.2.2015 in WPNs. 59915-916 of 2014 (T-RES)

**PREAMBLE :**

In the applications dated 23.10.2013 under reference (3), M/s Dow Chemical International Pvt. Limited, C/o CCI Logistic Ltd., Godown No.1, Survey No. 44/2, Adakamaranahalli Village, Dasanapura Hobli, Makali Post, Bengaluru - 562 123 (TIN - 29620366913) had sought clarification under Section 59(4) of KVAT Act, 2003 on the rate of tax applicable to the following goods.

i) Epoxy Resin DER 663 U-E
ii) Epoxy Resin DER 671 X75
iii) Specflex NF 749 Polyol
iv) Specflex FD 402 Polyol
v) Walocel CRT 50000 PA-07

2. Considering that the said goods are not specified in any of the Schedules to the Act, it was clarified that they are liable to tax at the rate of 14.5% from 01.8.2012 under Section 4(1)(b)(iii) of the Act vide clarification No. CLR/CR-102/2013-14 dt. 25.6.2014 in respect of commodities in SI.No. (i) and (ii) above and in respect of goods in SI.No. (iii), (iv), (v) vide clarification No. CLR/CR-103/ 2013-14 dt. 25.6.2014.

3. Being aggrieved by the above clarification, the applicant preferred a Writ Petition bearing No. WPN. 59915-916 of 2014 (T-RES) in the High Court of Karnataka challenging the above clarification. The Hon'ble High Court in its order dated 11-2-2015 set-aside the clarifications and remitted the case back to the Respondent for fresh consideration in accordance with law, after affording the petitioner an opportunity of being heard.

4. In keeping with the directions of the Hon'ble High Court, the applicant was heard on 19.5.2015. The grounds advanced by the applicant are summarized hereunder.

a) That they have been selling i) Specflex NF 749 Polyol, ii) Specflex FD 402, iii) Epoxy Resin DER 671-X75 and iv) Epoxy Resin DER 663U-E in Karnataka by treating these as industrial inputs. The industrial inputs fall under Entry at Sl. 0.51 of the Third Schedule, which reads as follows: "Industrial inputs and packing materials as may be noted". The he Government of Karnataka issued **Notification No. FD 197 CSL 2005(6) dated 30.04.2005,** in exercise of the powers conferred b clause (a) of sub-section (1) of Section 4 read with Entry Sl.No. 51 of the Third Schedule of the Karnataka VAT Act, in supersession of Notification No. FD 55 CSL 2005 (8) dated 23.03.2005, specifying with effect from the first day of May,2005, the goods in Column (3) of the table, with heading and sub-heading numbers under the Central Excise Tariff Act, specified in Column (2) as "Industrial inputs and packing materials". The relevant serial number in the Notification is 133 and the relevant heading is 3907. It would be relevant to reproduce the entry, which reads thus :

| Sl.No. | Heading and sub-heading No. | Description |
|---|---|---|
| 133 | 3907 | Polyacetals, other polyethers and epoxide resins, in primary forms; polycarbonates, alkyd resins, polyallylesters and other polyesters, in primary forms |

b) That it would be relevant to reproduce the tariff item No. 3907 along with description of goods, unit, and rate of duty in Chapter 39 of the Central Excise Tariff At, which reads thus :

| Tariff Item | Description of goods | Unit | Rate of duty |
|---|---|---|---|
| 3907 | Polyacetals, other polyethers and epoxide resins, in primary forms; polycarbonates, alkyd resins, polyallylesters and other polyesters, in primary forms | | |
| 3907 10 00 | Polyacetals | Kg. | 12% |
| 3907 20 | Other polyethers | | |
| 3907 20 10 | Poly (either alcohols) | Kg. | 12% |
| 3907 20 90 | Other | Kg. | 12% |
| 3907 30 | Epoxide resins | | |
| 3907 30 10 | Epoxy resins | Kg. | 12% |
| 3907 30 90 | Other | Kg. | 12% |
| 3907 40 00 | Polycarbonates | Kg. | 12% |
| 3907 50 00 | Alkyd resins | Kg. | 12% |
| 3907 60 | Poly (ethylene terephthalate) | | |
| 3907 60 10 | Having an intrinsic viscosity of less than 0.64 dl./g | Kg. | 12% |
| 3907 60 20 | Having an intrinsic viscosity of not less than 0.64 dl./g and not greater than 0.72 dl/g. | Kg. | 12% |
| 3907 60 90 | Other (including clean, colourless grades) | Kg. | 12% |
| 3907 70 00 | Poly (lactic acid) | Kg. | 12% |
| | Other Polyesters: | | |
| 3907 91 | Unsaturated | | |
| 3907 91 10 | Maleic resins | Kg. | 12% |
| 3907 91 20 | Polyester or contract resins | Kg. | 12% |
| 3907 91 30 | Fumeric resins | Kg. | 12% |
| 3907 91 40 | Diallylphthalate resins | Kg. | 12% |
| 3907 91 50 | Poly (butylenes terephthalate) | Kg. | 12% |
| 3907 91 90 | Other | Kg. | 12% |
| 3907 99 | Other | | |
| 3907 99 10 | Diallylphthalate resins | Kg. | 12% |

| Tariff Item | Description of goods | Unit | Rate of duty |
|---|---|---|---|
| 3907 99 20 | Poly (butylenes terephthalate) | Kg. | 12% |
| 3907 99 90 | Other | Kg. | 12% |

The expression "primary forms" applies only to the following forms:

(a) Liquids and pastes, including dispersions (emulsions and suspensions) and solutions;

(b) Blocks of irregular shape, lumps, powders (including moulding powders), granules, flakes and similar bulk forms.

c) that Interpretation Rules as prescribed by explanations to Notification No. FD 197 CSL 2005(6) dated : 30th April, 2005 are as under;

**"Explanations:** (1) The Rules for the interpretation of the Central Excise tariff Act, 1985 read with the Explanatory Notes as updated from time to time published by the Customs Co-operation Council, Brussels apply for the interpretation of this notification.

(2) Where any commodities are described against any heading or, as the case may be, sub- heading, and the aforesaid description is different in any manner from the corresponding description in the Central Excise Tariff Act, 1985, then only those commodities described as aforesaid will be covered by the scope of this notification and other commodities though covered by the corresponding description in the Central Excise Tariff will not be covered by the scope of this notification.

(3) Subject to explanation 2, for the purpose of any entry contained in this notification, where the description against any heading or, as the case may be, sub-heading, matches fully with the corresponding description in the Central Excise Tariff, then all the commodities covered for the purposes of the said tariff under that heading or sub-heading will be covered by the scope of this notification.

(4) Where the description against any heading or sub-heading is shown as "other" then the interpretation as provided in Explanation 2 shall apply."

d) That Tariff classification of our products as per the Central Excise Tariff Act is as under;

| Product | Tariff Heading | Tariff Heading sub-heading |
|---|---|---|
| Specflex NF 749 polyol | 3907 | 3907 20 10 |
| Specflex FD 402 polyol | 3907 | 3907 20 90 |
| Epoxy Resin DER 671-X75 | 3907 | 3907 30 90 |
| Epoxy Resin DER 663U-E | 3907 | 3907 30 90 |

e) That from the above tables it is very clear that the description of the subject materials as specified against Heading or sub-heading in the Notification matches fully with the corresponding description in the Central Excise Tariff. Thus the requirement of explanation 3 is fulfilled in its entirety and the materials qualify as "industrial inputs" attracting 5.5% VAT.

f) That Explanation No. 3 makes it abundantly clear that as long as product description matches that of either the heading **or** sub-heading, it is a sufficient compliance. This can be seen from the words used in the third explanation as under:

"(3) Subject to Explanation 2, for the purpose of any entry contained in this notification, where the description against any heading **or** as the case may be, sub-heading, matches fully with the corresponding description in the Central Excise Tariff, then all the commodities covered for the purposes of the said tariff under that heading or sub- heading will be covered by the scope of this notification." (emphasis supplied)

g) That it will thus be violative of the principle of interpretation as enunciated by the above mentioned notification to take a position that the products must match the description mentioned in both heading and sub-heading and matching with only heading description is not sufficient.

h) Given that matching of product description with either heading or sub-heading is sufficient compliance, it will also be incorrect to interpret that sub-heading is a specific entry and heading is general in nature and thus specific would prevail over general. As per the interpretation rule, both heading and sub-heading enjoy equal and independent status. This is further substantiated by the fact that heading and sub- headings are assigned different serial numbers in the Notification. Sub-headings are not grouped under the heading against the same serial number.

i) That in their case, the products completely match the product description of the heading 3907 in the Notification and hence there is no need look beyond whether the corresponding sub-heading is mentioned in the Notification or not.

j) That the Hon'ble Supreme Court in the case of **Share Medical Care [2007 (209) E.L.T.321 (S.C)] held as follows :**

"On the contrary, well settled law is that in case the applicant is entitled to benefit under two different Notifications or under two different Heads, he can claim more benefits and it is the duty of the authorities to grant such benefits if the applicant is otherwise entitled to such benefit ......"

k) That assuming without admitting that our products are not covered by sub-headings mentioned in Notification No. FD 197 CSL 2005(6),they are still entitled to the concessial levy of tax at 5.5% VAT as "Industrial inputs" since they are squarely covered by Sl.No. 133 of the Notification under the Heading 3907.

l) That attention is also invited to the Karnataka High Court decision in the case of **M/s Raman Boards Ltd. [2015-TIOL-756-HC-KAR-VAT]** where the Hon'ble High Court has held that it is impermissible to ignore a description and denote an article under another entry by a process of reasoning, if the said article falls within a description by the force of the words used.

m) That in their case, out of the 4 disputed products, two products are" "Epoxy Resin DER 671- X75" and "Epoxy Resin DER 663U-E." Entry No. 133 of the industrial input notification cover "Polyacetals, other polyethers and **epoxide resins.** in primary forms; polycarbonates, alky article under resins, polyallylesters and other polyesters, in primary forms". As their articles i.e., Epoxy Resins fall within the aforesaid descriptlon" by the force of the words used". the same cannot be disregarded and put under residual category to charge VAT @ 14.5%.

n) That as regards ingredients and composition of the subject chemical products, the following information furnished may kindly be considered:

A. Products: (a) Specflex NF 749 polyol and (b) Specflex FD 402 polyol:

i. Technical write-up

ii. Certificate of Analysis

iii. Material Safety Data Sheet

iv. Analytical report evidencing presence of Polyether in Specflex NF 749 and presence of Polyether Easter in Specflex FD 402

B. Products: (a) Epoxy Resin DER 671-X75 and (b) Epoxy Resin DER 663U-E:

i. Technical write-up

ii. Certificate of Analysis

iii. Product Information Report

iv. Analytical report from IIT, Bombay

The above details will conclusively prove that all the above mentioned four products fulfil the product characteristics of Chapter Heading 3907."

5. The matter is examined.

(I) In SI.No. 133 of the Notification NO. FD 197 CSL 2005(6) dated 30.4.2005, issued under Section 4 read with Entry 51 of Third Schedule to the Act has the following description of commodities notified as Industrial input and packing materials.

| Sl.No. | Heading and sub-heading No. | Description |
|---|---|---|
| 133 | 3907 | Polyacetals, other polyethers and epoxide resins, in primary forms; polycarbonates, alkyd resins, polyallylesters and other polyesters, in primary forms |

The description of goods in the tariff item 3907 in Chapter 39 of the Central Excise Tariff Act,1985 reads thus:

| Tariff Item | Description of goods | Unit | Rate of duty |
|---|---|---|---|
| 3907 | Polyacetals, other polyethers and epoxide resins, in primary forms; polycarbonates, alkyd resins, polyallylesters and other polyesters, in primary forms | | |
| 3907 10 00 | Polyacetals | Kg. | 12% |
| 3907 20 | Other polyethers | | |
| 3907 20 10 | Poly (either alcohols) | Kg. | 12% |
| 3907 20 90 | Other | Kg. | 12% |
| 3907 30 | Epoxide resins | | |
| 3907 30 10 | Epoxy resins | Kg. | 12% |
| 3907 30 90 | Other | Kg. | 12% |
| 3907 40 00 | Polycarbonates | Kg. | 12% |

